ಉಪನ್ಯಾಸ ಗ್ರಂಥಮಾಲೆ

೩೪೩

# ವಿಜ್ಞಾನವು ಅಪರಾಧಿಗಳನ್ನು ಹಿಡಿದುಕೊಡಬಲ್ಲುದೆ !

ಡಾ. ಬಿ. ಎಸ್. ಗಿರೆಪ್ಪಗೌಡರ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಜುಲೈ ೧೯೮೩

ಉಪನ್ಯಾಸ ಗ್ರಂಥಮಾಲೆ

೩೪೫

# ವಿಜ್ಞಾನವು ಅಪರಾಧಿಗಳನ್ನು ಹಿಡಿದುಕೊಡಬಲ್ಲುದೆ!


ಡಾ. ಬಿ. ಎಸ್. ಗಿರೆಪ್ಪಗೌಡರ

ಎಂ.ಎ., ಪಿಚ್.ಡಿ.






ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೬೩

ಪ್ರಕಾಶಕರು :
**ಎಸ್. ಬಿ. ನಾಯಕ**
ಕಾರ್ಯನಿರ್ವಾಹಕ ನಿರ್ದೇಶಕರು,
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ಜುಲೈ, ೧೯೮೩



ಬೆಲೆ : ೫೦ ಪೈಸೆ

ಮುದ್ರಕರು :
**ಅಶೋಕ ಎಲ್. ಆಕಳವಾಡಿ**
ವಾಸವಿ ಪ್ರಿಂಟರ್ಸ
ಬ್ಯಾಂಕ ರೋಡ, ಧಾರವಾಡ-೫೮೦ ೦೦೧

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು, ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ,ಜನಪ್ರಿಯವೂಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳ ಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ, ಮೊದ ಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದು ಕೊಂಡು, ಶಾಸ್ತ್ರ ಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯ ರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರು ಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲ ಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವದ ರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ

ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿಟ್ಟು ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೪೫ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನು ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಿ. ಎಂ. ನಂಜುಂಡಪ್ಪ
ಕುಲಪತಿಗಳು

# ಅರಿಕೆ

ಯಾವ ಕಾಲದಲ್ಲಿಯೂ ಕಥೆ, ಕಾದಂಬರಿಗಳಿಗೆ ಕೊರತೆಯಿಲ್ಲ. ಇವುಗಳಲ್ಲಿ ಅನೇಕವು ವೈಜ್ಞಾನಿಕ ವಿಷಯಗಳನ್ನು ವಸ್ತುವನ್ನಾಗಿ ಹೊಂದಿರುತ್ತವೆ. ಈ ವೈಜ್ಞಾನಿಕ ವಿಷಯಗಳಲ್ಲಿ ಕೆಲವೊಂದು ಸಲ ಗಾಳಿಗೋಪುರದ ವಿಚಾರಗಳೂ ರೂಪಗೊಂಡಿರಬಹುದು. ಕವಿಯು ತನಗೆ ಹೊಳೆದ ವಿಚಾರಗಳನ್ನು ಕಲ್ಪನೆಯ ರೂಪದಲ್ಲಿ ಯಾವದೊಂದು ವಿಜ್ಞಾನದ ಸಾಧನೆಯನ್ನು ಮೂಡಿಸಿರಬಹುದು. ಆ ಸಾಧನೆಯು ಕವಿಯು ಬರೆಯುವ ಸಮಯದಲ್ಲಿ ಗಾಳಿಯಲ್ಲಿ ಅರಮನೆಯನ್ನು ಕಟ್ಟಿದಂತಿರಬಹುದು. ಆದರೆ ಕಾಲಾಂತರದಲ್ಲಿ ಒಮ್ಮೊಮ್ಮೆ ಕವಿಯ ಗಾಳಿಗೋಪುರದ ವಿಚಾರಗಳೇ ವಿಜ್ಞಾನಿಗಳಿಂದ ಸಂಶೋಧನೆಯ ಮೂಲಕ ಪ್ರತ್ಯಕ್ಷವಾಗಬಹುದು. ಕವಿಯು ಕಾಲ್ಪನಿಕ ವಿಚಾರವಾದಿಯಾದರೆ, ವಿಜ್ಞಾನಿಯು ಪ್ರಯೋಗವಾದಿಯು. ವಿಜ್ಞಾನಿಯು ತನ್ನ ಕಲ್ಪನೆಯನ್ನು ನಂಬಿಸಬೇಕಾದರೆ ವೈಜ್ಞಾನಿಕ ಪ್ರಯೋಗದಿಂದ ಪ್ರತ್ಯಕ್ಷ ಮಾಡಿತೋರಿಸುವನು.

ಅಂತೆಯೇ ಅಗಾಥಾ ಕ್ರಿಸ್ಥಿ, ಆಯನ್ ಪ್ಲೇಮಿಂಗನಂತಹ ಕಾದಂಬರಿಕಾರರು ಶರಲಾಕ ಹೋಮ ಹಾಗೂ ಜೇಮ್ಸಬಾಂಡನಂತಹ ಪತ್ತೆದಾರರನ್ನು ಕಾಲ್ಪನಿಕವಾಗಿ ಊಹಿಸಿದ್ದರು. ಈ

ಕಾಲ್ಪನಿಕ ಪತ್ತೆದಾರರು ಆಗ ಉಪಯೋಗಿಸಿದ ಅನೇಕ ತಾಂತ್ರಿಕ ಉಪಕರಣಗಳು ಅವರ ಕಾಲದಲ್ಲಿ ಗಾಳಿಗೋಪುರದ ಮಾತಾಗಿದ್ದವು. ಆದರೆ ಇಂದು ಅವರು ಉಪಯೋಗಿಸಿದ ಉಪಕರಣಗಳಷ್ಟೇ ಅಲ್ಲ, ಅವರೂ ಸಹ ಊಹಿಸದಂತಹ ಸಂಶೋಧನೆಗಳೂ ಕೂಡ ಸುರುವಾದವು. ಬೆರಳಚ್ಚುಗಳ ಮತ್ತು ಅಪರಾಧಗಳ ಕಂಪ್ಯೂಟರ, ಅಗೋಚರ ಕಿರಣಗಳ, ವ್ಹಿಡಿಯೋ ಟೇಪರಿಕಾರ್ಡಿಂಗ, ವಾಯಿಸ್ ಸ್ಪೆಕ್ಟ್ರೊಗ್ರಾಫ್, ಪೊಲಿಯೊಗ್ರಾಫನಂತಹ ಸಾಧನಗಳನ್ನು ಪತ್ತೆದಾರರು ಅಪರಾಧಿಗಳನ್ನು ಕಂಡುಹಿಡಿಯುವದರಲ್ಲಿ ಉಪಯೋಗಿಸುತ್ತಿದ್ದಾರೆ.

ವಿಜ್ಞಾನಿಗಳ ಪರಿಚಯು ಜನರಿಗೆ ಇರಬಹುದು. ಆದರೆ ಅವರಿಗೆ ಈ ವಿಜ್ಞಾನಗಳು ಅಪರಾಧಿಗಳನ್ನು ಹೇಗೆ ಹಿಡಿದು ಕೊಡಲು ಸಹಾಯಕವಾಗುವವು ಎಂಬ ಪೂರ್ಣ ವಿಷಯು ಗೊತ್ತಿರಲಿಕ್ಕಿಲ್ಲ. ಸಾಮಾನ್ಯ ಜನರು ಉಪಯೋಗಿಸುತ್ತಿದ್ದ ವಿದ್ಯೆಯು ಮೂಲಕವೇ ಅಪರಾಧಿಗಳನ್ನು ಹಿಡಿದುಕೊಡಲು ಸಾಧ್ಯವಿರಬಹುದು. ಆದರೆ ಅವುಗಳನ್ನು ಉಪಯೋಗಿಸುವ ಪದ್ಧತಿ ಗೊತ್ತಿರುವದಿಲ್ಲ.

ಉದಾ : ಹಳ್ಳಿಗಳಲ್ಲಿ ಹೆಜ್ಜೆಗುರುತು, ಧ್ವನಿ, ನಡಿಗೆಗಳಿಂದ ಯಾವದೇ ವ್ಯಕ್ತಿಯನ್ನು ಗುರುತಿಸುವದು. ಆದ್ದರಿಂದ ಈ ವೈಜ್ಞಾನಿಕ ಯುಗದಲ್ಲಿ ಜನತೆಗೆ ವಿಜ್ಞಾನದ ಅವಶ್ಯಕತೆಯನ್ನು ತಿಳಿಸಲು ಪ್ರಯತ್ನಿಸಿದೆ. ಇನ್ನು ಜನಸಾಮಾನ್ಯರಿಗೆ ತಿಳಿಯುವ ಕನ್ನಡ ಭಾಷೆಯಲ್ಲಿ ಅಪರಾಧಿಗಳನ್ನು ವಿಜ್ಞಾನದ

ಸಹಾಯದಿಂದ ಕಂಡುಹಿಡಿಯುವ ಬಗೆಗೆ ಪುಸ್ತಕಗಳೇ ಇಲ್ಲ ಎಂದು ಹೇಳಬಹುದು. ಈ ದಿಸೆಯಲ್ಲಿ ಇದೊಂದು ಸಣ್ಣ ಪ್ರಯತ್ನ.

ಹಾದರ ಮತ್ತು ಕಳ್ಳತನ ಮುಚ್ಚುವದು ಅಸಾಧ್ಯ ಎಂದು ಗೊತ್ತಿದ್ದರೂ ಸಹ ಕೆಲವು ಜನರು ಅವನ್ನು ಮಾಡುವರು. ಯಾಕೆಂದರೆ ತಾವು ಸಿಕ್ಕುವದಿಲ್ಲ ಅಥವಾ ತಮ್ಮ ವಿರುದ್ಧ ಯಾರೂ ಈ ಹಳ್ಳಿಯಲ್ಲಿ ಸಾಕ್ಷಿಗಳನ್ನು ಹೇಳಲು ಸಾಧ್ಯವಿಲ್ಲವೆಂದು ವಿಚಾರ ಮಾಡಿರಬಹದು. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದಂತೆ. ಆದರೆ ವಿಜ್ಞಾನವು ಅವರನ್ನು ನೋಡಿರುತ್ತದೆ. ಅವರು ಮಾಡಿದ ಪ್ರತಿಯೊಂದು ಅಪರಾಧದಲ್ಲಿಯೂ ಯಾವದಾದರೊಂದು ವಸ್ತುವು ಅಪರಾಧಿಗಳನ್ನು ಹಿಡಿದು ಕೊಡಲು ಸಿಕ್ಕೇ ಸಿಗುತ್ತದೆ. ಈ ವಸ್ತುವಿನ ಮುಖಾಂತರ ವಿಜ್ಞಾನವು ಅಪರಾಧಿಗಳನ್ನು ಹಿಡಿಯಲು ಸಹಕರಿಸುತ್ತದೆ. ಅಪರಾಧಿ ಮನೋಭಾವವಿದ್ದವರಿಗೆ ಅಪರಾಧ ಮಾಡಿದರೆ ತಾವು ಸುಲಭವಾಗಿ ಪಾರಾಗಲು ಸಾಧ್ಯವೇ ಇಲ್ಲ ಎಂದಾಗ, ಅವರು ಅಪರಾಧದಿಂದ ದೂರ ಉಳಿಯಲು ಪ್ರಯತ್ನಿಸುವರು ಎಂದು ಹೇಳಬಹುದು. ಆದ್ದರಿಂದ ಹಲವರಿಗಾದರೂ ಇದರ ಅರ್ಥ ತಿಳಿದು ಅಪರಾಧಿಗಳಾಗದೇ ಉಳಿಯಬಹುದೆಂಬುದು ನನ್ನ ಆಶೆ.

ಕರ್ನಾಟಕ ವಿಶ್ವವಿದ್ಯಾಲಯದ ೨೭೨ ನೆಯ ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರವು ಬಳ್ಳಾರಿ ಜಿಲ್ಲೆಯ ಅಂಕ ಸಮುದ್ರ ಗ್ರಾಮದಲ್ಲಿ ನೆರವೇರಿದಾಗ ಅಲ್ಲಿ ನಾನು ಮಾಡಿದ

ಉಪನ್ಯಾಸವು ಪುಸ್ತಕ ರೂಪದಲ್ಲಿ ಪ್ರಕಟಗೊಳ್ಳುತ್ತಿದೆ. ಇದಕ್ಕೆ ಕಾರಣರಾದ ಪ್ರಸಾರಾಂಗದ ನಿರ್ದೇಶಕರಾಗಿದ್ದ ಶ್ರೀ ಸಿ. ಎಸ್. ಕಣವಿ, ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ, ಮತ್ತು ಶ್ರೀ ಎಲ್. ಎಂ. ಗುಡ್ಡಿನ ಅವರಿಗೂ ಹಾಗೂ ಮಾನ್ಯ ಕುಲಪತಿಗಳಾದ ಡಾ. ಡಿ. ಎಂ. ನಂಜುಂಡಪ್ಪ ಅವರಿಗೂ ನನ್ನ ಕೃತಜ್ಞತೆಗಳು.

ನನಗೆ ಕನ್ನಡದಲ್ಲಿ ಬರೆಯುಲು ಪ್ರೋತ್ಸಾಹವಿತ್ತಿರುವ ಡಾ॥ ಕೆ.ಜಿ. ಗುರುಮೂರ್ತಿ, ಡಾ. ಬಿದರಕೊಪ್ಪ, ಡಾ॥ ಗುಬ್ಬಣ್ಣವರ ಹಾಗೂ ಶ್ರೀ ಅನಿಲ ಬೆಟಗೇರಿಯವರಿಗೆ ನನ್ನ ಕೃತಜ್ಞತೆಗಳು. ಈ ಉಪನ್ಯಾಸದ ಸಮಯದಲ್ಲಿ ಸಹಕರಿಸಿದ ಯಾವತ್ತೂ ಅಂಕ ಸಮುದ್ರ ಗ್ರಾಮದ ಜನತೆಗೆ ಕೃತಜ್ಞತೆಗಳು. ಕೊನೆಯದಾಗಿ ಈ ಪುಸ್ತಕ ಬರೆಯುಲು ಸಹಕರಿಸಿದ ನನ್ನ ಪತ್ನಿಗೂ ನನ್ನ ನೆನಕೆಗಳು.

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಅಪರಾಧಶಾಸ್ತ್ರ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ ಬಿ. ಎಸ್. ಗಿರೆಪ್ಪಗೌಡರ
ಧಾರವಾಡ

# ಪ ರಿ ವಿ ಡಿ

# ೧. ಪ್ರಸ್ತಾವನೆ

ಇಂದು ವಿಜ್ಞಾನವು ಪ್ರತ್ಯಕ್ಷವಾಗಿಯಾಗಲೀ ಇಲ್ಲವೆ ಅಪ್ರತ್ಯಕ್ಷವಾಗಿಯಾಗಲೀ ಮಾನವನ ಎಲ್ಲ ಚಟುವಟಿಕೆಗಳಲ್ಲಿ ತನ್ನದಾದ ವಿಶಿಷ್ಟ ಪಾತ್ರವನ್ನು ಆಡುತ್ತಿದೆ. ಇವುಗಳಲ್ಲಿ ಎಲ್ಲಕ್ಕೂ ಮುಖ್ಯವಾದುದು ಕಾನೂನು ಮತ್ತು ಅದರಿಂದುಂಟಾಗುವ ಶಿಸ್ತು ಎಂದು ಹೇಳಬಹುದು. ಸಮಾಜ ರಕ್ಷಣೆಗೆ ಸತತ ಕಾಲವನ್ನು ಇರಿಸುವ ಈ ವ್ಯವಸ್ಥೆಯು ಬಹಳ ಪರಿಣಾಮಕಾರಿಯಾಗಿದೆ. ಈ ಕ್ಷೇತ್ರದಲ್ಲಿ ಎಲ್ಲ ವಿಜ್ಞಾನಗಳು ತತ್ವಶಃ ತಮ್ಮ ಸಹಕಾರವನ್ನು ನೀಡುತ್ತಿವೆ. ಸುಭದ್ರವಾದ ಆಡಳಿತದಿಂದ ಅಪರಾಧಗಳ ವಿಷಯದಲ್ಲಿ ವಿಶೇಷ ಮಹತ್ವವನ್ನಿತ್ತು ಅವುಗಳನ್ನು ಶೋಧ ಮಾಡಿ ಕಂಡು ಹಿಡಿಯುವ ಕೆಲಸದಲ್ಲಿ ಬಹಳ ಸಹಾಯ ಮಾಡುತ್ತಿರುವವು. ಈ ವಿಜ್ಞಾನಗಳು ಸಂಪೂರ್ಣವಾಗಿ ಸಂಶೋಧನೆಯಿಂದ ಆವೃತವಾದ ಇದಕ್ಕೆ ವಿಧಿವಿಜ್ಞಾನ (Forensic Science) ಎಂಬ ಹೆಸರನ್ನು ಕೊಡಲಾಗಿದೆ. ಇದಕ್ಕೆ ಅಪರಾಧ ಶೋಧ ಶಾಸ್ತ್ರ ಎಂದೂ ಕರೆಯಬಹುದು. ಈ ಶಾಸ್ತ್ರದಲ್ಲಿ ಪರಿಣತರಾದ ಪಂಡಿತರು ಈ ವಿಷಯವನ್ನೇ ಅಭ್ಯಾಸಮಾಡಿ ಪಾರಂಗತರಾದವರು ಕಾನೂನುಗಳ ಸಹಾಯದಿಂದ ಅಪರಾಧಕ್ಕೆ ಸಂಬಂಧಪಟ್ಟ ಸ್ಥೂಲವಸ್ತುಗಳ ಇಂಗಿತವನ್ನು ಅರಿತು ಸಮಾಜದಲ್ಲಿ ಶಾಂತಿಯನ್ನು ತರುವದಕ್ಕೆ ಕೆಲಸ

ಮಾಡುತ್ತಿದ್ದಾರೆ. ಅವರ ಈ ಕೆಲಸವು ಅಪರಾಧಿಗಳ ಅಸಹಾಯಕ ಸ್ಥಿತಿಯನ್ನು ಗುರುತಿಸಲು ಪರ್ಯಾಯವಾಗಿ ಸಹಾಯಕವಾಗಿದೆ.

ಈ ಪ್ರಯೋಗಶೀಲ ಹಾಗೂ ಕಾರ್ಯಗತ ವಿಜ್ಞಾನವು ಒಂದಿಲ್ಲೊಂದು ರೂಪದಲ್ಲಿ ಕಳೆದ ನೂರಾರು ವರ್ಷಗಳಿಂದ ನಮ್ಮೊಂದಿಗೆ ಬೆಳೆಯುತ್ತ ಇರುತ್ತ ಬಂದಿದೆ. ಈಗ ಅದು ಮಾರ್ಮಿಕವಾದ ಪ್ರಗತಿಯನ್ನು ಹೊಂದಿದೆ ಎಂದು ಹೇಳ ಬಹುದು. ಕಳೆದ ೫೦ ವರ್ಷಗಳಲ್ಲಿಯಂತೂ ಈ ಶಾಸ್ತ್ರವು ಬಹಳ ಪ್ರಗತಿ ಸಾಧಿಸಿ ಮಾನವ ಜೀವನದ ಮೇಲೆ ಊಹೆಗೆ ನಿಲುಕಪಷ್ಟು ದರಿಣಾಮ ಮಾಡುತ್ತಿರುವನ್ನು ನಾವು ಇಂದು ಪ್ರತ್ಯಕ್ಷ ಕಂಡು ಮನಗಾಣಬಹುದು,

ಇದೀಗ ವಿಧಿ ವಿಜ್ಞಾನವು ವಿಶ್ವ ಮನ್ನಣೆಯನ್ನು ಪಡೆದ ಶಾಸ್ತ್ರವಾಗಿದೆ. ಕಾನೂನಿನ ಶಾಂತಿಯನ್ನು, ಶಿಸ್ತು ಜೀವನವನ್ನು ಉಂಟು ಮಾಡಲು ಈ ಶಾಸ್ತ್ರವು ಸಮಾಜ ಪುರುಷನ ಬಲಗೈಯಂತಾಗಿದೆ. ಅಪರಾಧ ಹಾಗೂ ಹಿಂಸೆಗಳು ದಿನ ದಿನಕ್ಕೆ ಹೆಚ್ಚಾಗುತ್ತ ತಮ್ಮ ತಾಂಡವ ನೃತ್ಯವನ್ನೇ ನಡೆಸಿರುವು ದನ್ನು ನಾವು ಇಂದು ನಮ್ಮ ಕಣ್ಣುಗಳಿಂದ ನೋಡಬಹುದಾಗಿದೆ. ಅಂತೆಯೇ ಎಲ್ಲ ರಾಷ್ಟ್ರಗಳೂ ಇಂದು ಈ ವಿಧಿ ವಿಜ್ಞಾನದ ಸಹಾಯ ಪಡೆಯಲು ಮುಂದಾಗಿವೆ. ತೀರ ಸುಧಾರಿಸಿದ ರಾಷ್ಟ್ರಗಳೂ ಕೂಡ ಕಲುಷಿತವಾದ ಅಪರಾಧ ಮತ್ತು ಹಿಂಸೆ ಗಳನ್ನು ಹತ್ತಿಕ್ಕಲು ಅತ್ಯಂತ ಮುಂದುವರೆದ ವಿಜ್ಞಾನ

ಸಹಾಯವನ್ನು ಪಡೆಯಲು ಕೈಚಾಚಿವೆ. ಶಿಷ್ಟರ ರಕ್ಷಣೆ ಹಾಗೂ ದುಷ್ಟರ ಶಿಕ್ಷೆಗಳೆರಡೂ ಏಕಕಾಲದಲ್ಲಿ ನಡೆಯಬೇಕಾಗಿದೆ.

ರೂಢಿಗತವಾದ, ಮೂಢ ನಂಬಿಕೆಗಳಿಂದ ಕೂಡಿದ ಹಿಂದಿನ ಪುರಾವೆಗಳೀಗ ಆಧುನಿಕ ವೈಜ್ಞಾನಿಕ ಯುಗದಲ್ಲಿ ಹೆಚ್ಚು ಪ್ರಯೋಜನಕ್ಕೆ ಬಾರದಾಗಿವೆ. ಕಣ್ಣಾರೆ ಕಂಡ, ಕಿವಿಯಾರೆ ಕೇಳಿದ ಪುರಾವೆಗಳೀಗ ವಿಜ್ಞಾನದ ನಿಕಷಕ್ಕೆ ತಾಗದೇ ನಂಬಲರ್ಹವಾದವುಗಳಾಗಿಲ್ಲ. ಅವುಗಳಿಗೆ ಆಧಾರವಾಗಿ ಇನ್ನೂ ಅನೇಕ ಸಂಗತಿಗಳ ಅವಶ್ಯಕತೆ ಉಂಟಾಗ ತೊಡಗಿದೆ. ಈ ಪುರಾವೆಗಳು ಅವ್ಯವಹಾರ್ಯ ಪುರಾವೆಗಳೆಂದು ಹೇಳಲು ಬರುವಂತಿರುತ್ತವೆ.

ಇಂದಿನ ಸಮಾಜವು ಕಿಕ್ಕಿರಿದ ಜನರಿಂದ ತುಂಬಿದೆ. ಉಸಿರಾಡಿಸಲು ಬಾರದಂತೆ ಆಗಿದೆ. ಅಲ್ಲದೇ ಅದು ಅತೀವ ಚಂಚಲವಾಗಿದೆ, ಹರಿಯುವ ಹೊಳೆಯಂತಿದೆ. ಇದರೊಂದಿಗೆ ನಾನಾ ಬಗೆಯ ಜನರಿಂದ ಕೂಡಿದ ಈ ಸಮಾಜದ ರೀತಿ ನೀತಿಗಳು ಒಂದೇ ಬಗೆಯಾಗಿರದೇ ವಿಭಿನ್ನವಾಗಿದೆ, ಸಂಕೀರ್ಣವಾಗಿದೆ. ಇಂತಹ ಸಮಾಜದಲ್ಲಿ ಅಪರಾಧ ಶೋಧನಕ್ಕೆ ಹಳೆಯ ಶೋಧನೆಗಳಾವವೂ ಪ್ರಯೋಜಕ್ಕೆಬಾರವೆಂದು ಅನುಭವದಿಂದ ಕಂಡು ಹಿಡಿಯಲಾಗಿದೆ. ಹೊಸದಾಗಿ ಕಂಡು ಹಿಡಿದ ವಿಧಿ ವಿಜ್ಞಾನವು ಇವಕ್ಕೆ ಹೊಸ ರೂಪ ಕೊಡುತ್ತಿದೆ. ಅಪರಾಧ ನಿರ್ಮೂಲನೆಯ ನ್ಯಾಯಕ್ಕೆ ನೂತನ ತತ್ವ ಪ್ರಣಾಲಿಕೆಗಳನ್ನು ನಿರ್ಮಿಸಿದೆ. ಅತ್ಯಂತ ಮಹತ್ವದ ಮಾನವನ ಚಟುವಟಿಕೆಗಳಲ್ಲಿ ಒಂದು ಕ್ರಾಂತಿಯನ್ನೇ ತಂದಿದೆ ಎಂದು ಹೇಳಬಹುದು.

ನೂರಾರು ವರ್ಷಗಳ ಹಿಂದೆ ಅನೇಕ ರಾಷ್ಟ್ರಗಳಲ್ಲಿ ಆಗ ಲಭ್ಯವಿದ್ದ ವೈಜ್ಞಾನಿಕ ಸಾಧನಗಳ ಉಪಯೋಗಗಳನ್ನು ತೆಗೆದು ಕೊಂಡು ಅಪರಾಧಗಳನ್ನು ಕಂಡುಹಿಡಿಯಲು ಪೋಲಿಸರ ನೆರ ವಿನಿಂದ ಹಾಗೂ ವೈದ್ಯಕೀಯ ಜ್ಞಾನದ ಸಹಾಯದಿಂದ ಪ್ರಯತ್ನ ಮಾಡಿ ನೋಡಲಾಯಿತು. ಆದರೆ ಈ ಕೆಲಸವು ಆಗ ಭರದಿಂದ ನಡೆಯಲಿಲ್ಲ. ಅದಕ್ಕೆ ಅನೇಕ ಅಡೆತಡೆಗಳು ಬಂದವು. ತೀರ ಪ್ರಾಥಮಿಕ ವೈಜ್ಞಾನಿಕ ಉಪಾಯಗಳು ಪ್ರಯೋಜನಕ್ಕೆ ಬರಲಿಲ್ಲ ಯಾಕೆಂದರೆ ಅವುಗಳ ಕ್ಷೇತ್ರ ವಿಸ್ತಾರ ವಾಗಿರದೇ ಸಂಕುಚಿತವಾಗಿತ್ತು.

ಅಪರಾಧ ಶೋಧ ಶಾಸ್ತ್ರಜ್ಞರು ರಾಜ್ಯವಿಲ್ಲದ ರಾಜರಂತಿ ರುವರು. ಶರೀರ ಶಾಸ್ತ್ರ ಕೋವಿದರು, ಮಾನಸ ಶಾಸ್ತ್ರ ಪಂಡಿತರು, ಅಪರಾಧ ಸಂಶೋಧನೆಯನ್ನು ತಮ್ಮ ಶಾಸ್ತ್ರಗಳ ಸಹಾಯದಿಂದ ಮಾಡುತ್ತ ಬಂದಿದ್ದಾರೆ. ಉಳಿದ ವಿಜ್ಞಾನ ಗಳೂ ಈ ಕಾರ್ಯದಲ್ಲಿ ಭಾಗವಹಿಸಿದ್ದವು. ಆದರೆ ಅಪರಾಧ ಮನೋವೃತ್ತಿಯ ಬೇರಿನವರೆಗೂ ಹೋಗಲಿಕ್ಕೆ ಹಾಗೂ ಬೇರು ಸಹಿತ ಅವರ ನಿರ್ಮೂಲನೆಯನ್ನು ಮಾಡಲಿಕ್ಕೆ ಅವುಗಳಿಂದ ಆಗಲಿಲ್ಲ. ಒಂದೊಂದೇ ಶಾಸ್ತ್ರದ ಕಟ್ಟುನಿಟ್ಟಿನ ಪ್ರಯತ್ನಗಳಿಗೆ ದೊರೆಯಬೇಕಾದಷ್ಟು ಯಶಸ್ಸು ದೊರೆಯಲಿಲ್ಲ. ಇಷ್ಟ ರಿಂದಲೇ ಇವರು ತೃಪ್ತರಾಗಬೇಕಾಯಿತು. ಬೇರೆ ವಿಜ್ಞಾನಿ ಗಳು ಶೋಧ ಮಾಡಿದ ವಿಷಯಗಳನ್ನು ಸಂಗ್ರಹಿಸಿದರು, ಯಾಕೆಂದರೆ ವಿಧಿ ಶಾಸ್ತ್ರಜ್ಞರಿಗೆ ತಮ್ಮದೇ ಆದ ಕ್ಷೇತ್ರವಿರಲಿಲ್ಲ. ಅಂತೆಯೇ ಅವರು ರಾಜ್ಯವಿಲ್ಲದ ರಾಜರಿರುವರೆಂದು

ಪ್ರಾರಂಭಕ್ಕೆ ಹೇಳಲಾಗಿದೆ. ಸ್ವತಂತ್ರ ಅಸ್ತಿತ್ವವಿಲ್ಲದೇ ಯಾವ ಕೆಲಸವೂ ಮುಂದುವರೆಯಲಾರದು. ತನ್ನ ಅಸ್ತಿತ್ವವನ್ನು ಪ್ರಭಾವಶಾಲಿಯಾಗಿ ಯಾವದೇ ವಿಜ್ಞಾನವು ತೋರಿಸಿ ಕೊಡ ಬೇಕಾದರೆ ಮೊದಲಿಗೆ ತನ್ನದೇ ಆದ ಒಂದು ಸ್ಥಾನವನ್ನು ನಿರ್ಮಿಸಿಕೊಳ್ಳಬೇಕಾಗುತ್ತದೆ. ಅಂದರೆ ಅದಕ್ಕೊಂದು ನಿಶ್ಚಿತ ರೂಪ ಬಂದಂತಾಗುತ್ತದೆ.

## ೨. ಅಪರಾಧ ಶೋಧ ಶಾಸ್ತ್ರವೆಂದರೇನು ?

## (What is Forensic Science?)

ಈ ಶಾಸ್ತ್ರಕ್ಕೆ Forensic Science ಎಂದು ಕರೆಯುತ್ತೇವೆ. ಇದರಲ್ಲಿ ಬರುವ Forensic ಎಂಬ ಮೂಲ ಲ್ಯಾಟಿನ 'Forum' ಎಂಬ ಶಬ್ದದಿಂದ ಬಂದಿದೆ. ಲ್ಯಾಟಿನ ಶಬ್ದದ ಅರ್ಥ ಸಂತೆ ಅಥವಾ ಸಾರ್ವಜನಿಕ ಸ್ಥಳವೆಂದಾಗುತ್ತದೆ. ರೋಮನ್ ಜನರು ಕಾನೂನಿನ ಕೊರತೆಗಳನ್ನು ಈ ಸಾರ್ವಜನಿಕ ಸ್ಥಳಗಳಲ್ಲಿ ಸಭೆ ಸೇರಿ ಚರ್ಚೆ ಮಾಡುತ್ತಿದ್ದರು. ವೆಬ್‌ಸ್ಟರ ಅರ್ಥ ಕೋಶವು ಇದೇ ಅರ್ಥವನ್ನು ಸೂಚಿಸುತ್ತದೆ. ವಾದದಿಂದ ಜನಿಸಿದ ಶಾಸ್ತ್ರವೆಂದು ನಾವು ಅರ್ಥ ಮಾಡಬಹುದು. ಸಂಸ್ಕೃತದಲ್ಲಿಯೂ 'ವಾದೇವಾದೇ ಜಾಯತೆ ತತ್ವ ಬೋಧಃ' ಎಂಬ ನುಡಿಯು ಇಲ್ಲಿ ಜ್ಞಾಪಕಕ್ಕೆ ಬರುತ್ತದೆ. ಭಾರತದಲ್ಲಿಯೂ ಕೂಡ ಹಿಂದಿನ ಕಾಲದಲ್ಲಿ ಇದೇ ರೀತಿ ಸಾರ್ವಜನಿಕ ಸ್ಥಳಗಳಲ್ಲಿ ಅಂದರೆ ಪಂಚಾಯತಗಳಲ್ಲಿ ತಮ್ಮ ನ್ಯಾಯಗಳನ್ನು

ಬಗೆಹರಿಸಿಕೊಳ್ಳುತ್ತಿದ್ದರು. ಈಗಲೂ ಕೂಡ ಕೆಲವು ತೀರ ಹಿಂದುಳಿದ ಜನಾಂಗಗಳಲ್ಲಿ ಪಂಚಾಯತ ಪದ್ಧತಿ ಇರುವದನ್ನು ನಾವು ಕಣ್ಣಾರೆ ಕಾಣಬಹುದು

ನ್ಯಾಯಾಲಯದಲ್ಲಿ ಉಪಯೋಗಿಸುವ ವಿಜ್ಞಾನವೆಂದೂ, ಖಚಿತ ಪುರಾವೆಗಳ ಅಥವಾ ತಜ್ಞ, ಸಾಕ್ಷಿಗಳ ಮೇಲೆ ಆಧಾರ ವಾದ ಶಾಸ್ತ್ರವೆಂದು ಹೇಳಬಹುದು. ಆದ್ದರಿಂದ ಇದೊಂದು ಬಗೆಯ ಸತ್ಯ ಸಂಶೋಧನೆ ಎಂದೂ ತೋರಲಿಕ್ಕೆ ಸಂದೇಹವಿಲ್ಲ. ಸಮಾಜಕ್ಕೆ ಅನ್ಯಾಯ ಯಾವದೇ ಕಾರಣಗಳಿಂದ ಆಗಬಾರದು. ಆ ಕಾರಣವು ಸಭ್ಯ ಇಲ್ಲವೆ ಅಸಭ್ಯ ಎಂದರೆ ಕಳವು, ಕೊಲೆ, ಇತ್ಯಾದಿ ರೂಪ ತಾಳಿರಬಹುದು. ಸಿವ್ಹಿಲ್ ಹಾಗೂ ಕ್ರಿಮಿನಲ್ ಶಬ್ದಗಳು ಈ ಅರ್ಥದಲ್ಲಿ ಬಳಸುವವು. ಅಪರಾಧ ಹಾಗೂ ಅಪರಾಧಿಗಳು ಸಮಾಜದ ಕಾಳಕೂಟ ವಿಷಗಳೆಂದೂ, ಗಂಡಾಂತರಕಾರಿಯಾದ ಘಟಕಗಳೆಂದೂ ಹೇಳಬಹುದು. ಇವು ಸಮಾಜಕ್ಕೆ 'ಶಾಪ' ಎಂದೂ ಭಾವಿಸಲಾಗಿದೆ. ಸಾಮಾಜಿಕ ಕಲ್ಯಾಣಕ್ಕೆ ಇವು ಆತಂಕಗಳಾಗಿವೆ. ಇದನ್ನು ತಡೆಹಿಡಿಯಲೇ ಬೇಕು. ಇದಕ್ಕಾಗಿಯೇ ಪೋಲೀಸ ಖಾತೆಯು ಎಲ್ಲ ರಾಷ್ಟ್ರ ಗಳಲ್ಲಿಯೂ ಇರುತ್ತದೆ.

ಅಪರಾಧಿಗಳನ್ನು ಕಂಡುಹಿಡಿಯುವ ಶಾಸ್ತ್ರವು ವಿಧಿ ವಿಜ್ಞಾನವಾಗಿವೆ. ಇದರಲ್ಲಿ ನಾವು ಉಳಿದೆಲ್ಲ ಶಾಸ್ತ್ರಗಳ ಉಪ ಯೋಗವನ್ನು ತೆಗೆದುಕೊಳ್ಳುತ್ತೇವೆ. ರಸಾಯನ, ಶರೀರ, ಸಸ್ಯ, ಪ್ರಾಣಿ, ಭೂಗರ್ಭ, ಪದಾರ್ಥ ವಿಜ್ಞಾನ ಹಾಗೂ ಮಾನವಶಾಸ್ತ್ರಗಳನ್ನು ಸಹಾಯಕ್ಕೆ ತಕ್ಕೊಳ್ಳುತ್ತೇವೆ. ಈ ವಿಜ್ಞಾನ

ಗಳ ಅಭ್ಯಾಸವು ಅವುಗಳ ಮೂಲಭೂತ ಗುಣಧರ್ಮಗಳನ್ನು ತಿಳಿದುಕೊಳ್ಳುವದಾಗಿರುತ್ತದೆ. ಆದರೆ ವಿಧಿ ವಿಜ್ಞಾನದಲ್ಲಿ ಇವುಗಳನ್ನು ಪ್ರಯೋಗಕ್ಕೆ ಹಚ್ಚಿ, ಅದರಿಂದ ಹೆಚ್ಚಿನ ವಿಷಯ ಗಳನ್ನು ತಿಳಿದುಕೊಂಡು, ಪ್ರತ್ಯಕ್ಷ ಪ್ರಯೋಗ ಮಾಡಿ ನೋಡಿ ಅದರಿಂದ ಅನೇಕ ಹೊಸ ಗುಣಧರ್ಮಗಳನ್ನು ಕಂಡುಹಿಡಿದು, ಅವುಗಳನ್ನು ಅಪರಾಧ ಶೋಧನೆಯಲ್ಲಿ ಉಪಯೋಗಿಸುತ್ತೇವೆ. ನ್ಯಾಯಾಲಯದಲ್ಲಿ ಈ ತಜ್ಞರ ಅಭಿಪ್ರಾಯಗಳೇ ಹೆಚ್ಚು ನಂಬಿಗೆ ಯನ್ನು ಹುಟ್ಟಿಸುತ್ತವೆ.

ಕಳೆದ ಕೆಲವು ವರ್ಷಗಳಲ್ಲಿ ಈ ಶಾಸ್ತ್ರವು ತನ್ನದೇ ಆದ ಅನೇಕ ಶಾಖೆಗಳಿಗೆ ಎಡೆಕೊಟ್ಟಿದೆ. ಬೆರಳಚ್ಚಿನ ಶಾಸ್ತ್ರ, ಮಾನವ ಶರೀರದ ಅಳತೆ ಮಾಡುವ ಶಾಸ್ತ್ರ, ಅಸ್ತ್ರಾಸ್ತ್ರಗಳ ಶಾಸ್ತ್ರ, ಕೈ ಬರಹ ಗುರುತಿಸುವ ಶಾಸ್ತ್ರ, ವಿಷ ಶಾಸ್ತ್ರ, ಇತ್ಯಾದಿ ಗಳೆಲ್ಲ ಈ ಶಾಸ್ತ್ರದ ಶಾಖೆಗಳಾಗಿವೆ. ತೀರ ಇತ್ತೀಚೆಗೆ ಧ್ವನಿ ಗಳ ಪೃಥಃಕರಣ, ವಾಸನೆಯ ವಿಭಜನೆ ಹಾಗೂ ಮೂಗು, ಕಿವಿ ಗಳ ಪಡಿಯಚ್ಚು ಶಾಸ್ತ್ರಗಳು ಬಹಳ ಮುಂದುವರೆದಿವೆ. ಅಪರಾಧಗಳ ಶೋಧನೆಯಲ್ಲಿ ಹೊಸ ಜ್ಞಾನವನ್ನು ಉಪಯೋಗಿ ಸುವ ಅವಶ್ಯಕತೆಯು ದಿನದಿನಕ್ಕೆ ಹೆಚ್ಚಾಗ ತೊಡಗಿದೆ.

ಸಮಾಜವು ತ್ವರಿತ ಗತಿಯಿಂದ ಆಮೂಲ ಬದಲಾಗುತ್ತ ಸಾಗಿದೆ. ಹೇಳಿಕೊಳ್ಳುವಷ್ಟು ಹೆಚ್ಚಿಗೆ ಪ್ರಮಾಣದಲ್ಲಿ ದೊಡ್ಡ ದೊಡ್ಡ ಉದ್ಯಮಗಳು ಅಸ್ತಿತ್ವದಲ್ಲಿ ಬಂದಿವೆ. ಸಾರಿಗೆಯ ಸಾಧನಗಳಲ್ಲಿ ಕ್ರಾಂತಿಕಾರಕವೆನ್ನುವಷ್ಟು ಬದಲಾವಣೆ ಕಂಡು

ಬರುತ್ತಿದೆ. ಗ್ರಾಮೀಣ ಸಮಾಜವು ನಗರ ಸಮಾಜಕ್ಕೆ ಪರಿವರ್ತನೆಯಾಗುತ್ತಿದೆ. ಈ ಬದಲಾವಣೆಗಳು ಹಿಂದಿನ ಅಪರಾಧ ಶೋಧದ ಎಲ್ಲ ಸಾಧನಗಳನ್ನೂ ನಿರುಪಯೋಗಿಯಾಗಿ ಮಾಡಿ, ಹಿಂದಕ್ಕೆ ತಳ್ಳಿವೆ. ಅಪರಾಧಿಯು ಒಂದು ನಗರದ ಯಾವುದೇ ಒಂದು ಮೂಲೆಯಲ್ಲಿ ಅಡಗಿರಬಲ್ಲ. ಅಥವಾ ಕೆಲವೇ ಗಂಟೆಗಳಲ್ಲಿ ಸಾವಿರಾರು ಮೈಲು ಅಪರಾಧ ಗೈದ ಸ್ಥಳದಿಂದ ದೂರ ಪ್ರವಾಸ ಮಾಡಬಲ್ಲ. ಆದ್ದರಿಂದ ಅತ್ಯಾಧುನಿಕ ಯಂತ್ರೋಪಕರಣಗಳು ಅಪರಾಧಿಗಳನ್ನು ಕಂಡು ಹಿಡಿಯಲು ಅನಿವಾರ್ಯವೆಂದು ಹೇಳಬಹುದು.

ತಜ್ಞರಿಂದ ಬೆಲೆಕಟ್ಟಿದ ಪ್ರಾಕೃತ ಪುರಾವೆಯು ವಸ್ತುನಿಷ್ಠವಾಗಿರುತ್ತದೆ. ಅಪರಾಧ ಮಾಡಿದ ಸ್ಥಳದಲ್ಲಿ ಬೆರಳುಗಳ ಅಚ್ಚು ಸಿಕ್ಕರೆ ಅದು ಕೇವಲ ಒಂದೇ ಮನುಷ್ಯನದಾಗಿರುತ್ತದೆ. ಆ ಮನುಷ್ಯನು ಅಪರಾಧ ನಡೆದ ಸ್ಥಳದಲ್ಲಿದ್ದನೆಂಬುದನ್ನು ಸಿದ್ಧ ಮಾಡಿ ತೋರಿಸಬಹುದು. ಅದೇ ಪ್ರಕಾರ ಮೃತ ದೇಹದಿಂದ ಒಂದು ಗುಂಡನ್ನು ತಿರುಗಿ ಪಡೆದಿದ್ದರೆ ಅದು ಇಂಥಹದೇ ಬಂದೂಕಿನಿಂದ ಹಾರಿಸಿರಬಹುದೆಂದು ಗೊತ್ತಾಗುತ್ತದೆ. ಈ ಬಂದೂಕು ಅಪರಾಧಿಯ ಒಡೆತನಕ್ಕೆ ಸೇರಿದ್ದಾದರೆ ಆತನು ಈ ಅಪರಾಧದಲ್ಲಿ ಅದು ಹೇಗೆ ಸಿಕ್ಕಿಕೊಂಡಿತೆಂಬುದನ್ನು ತೋರಿಸಬೇಕಾಗುತ್ತದೆ. ಕೆಲವು ಸಲ ಈ ಪ್ರಕಾರದ ಪುರಾವೆಗಳು ಅಲ್ಪ ಸ್ವಲ್ಪ ಬದಲಾವಣೆಯಾಗಿರಲೂಬಹುದು.

ಪ್ರಾಕೃತ ಪುರಾವೆಗಳಿಗೆ ಸಂಬಂಧಿಸಿದ ಶೋಧವು ಮತ್ತು ಅದರ ವಿವರಣೆಯು ಒಂದು ವಸ್ತು ಯಾವ ಗುಂಪಿಗೆ ಸೇರಿದೆ

ಎಂಬುದನ್ನು ನಿರ್ಧರಿಸಿ ಹೇಳುತ್ತದೆ. ಬೆರಳಚ್ಚುಗಳು, ಮಣ್ಣು, ಗ್ಲಾಸು, ಬಣ್ಣ, ರಕ್ತ, ಕೂದಲು, ಇತ್ಯಾದಿಗಳನ್ನು ವರ್ಗೀಕರಿಸಿ ಅಪರಾಧ ನಡೆದ ಸ್ಥಳದಲ್ಲಿಯ ವಸ್ತುಗಳನ್ನು ಗುರುತಿಸ ಬಹುದು. ಮೃತ ದೇಹದಲ್ಲಿ ದೊರೆತ ಗುಂಡನ್ನು ಅಪರಾಧ ಶೋಧ ಶಾಸ್ತ್ರಜ್ಞನಿಗೆ ಕೊಟ್ಟು, ಹಾರಿಸಿದ ಬಂದೂಕನ್ನು, ಹಾರಿಸಿದ ಅಪರಾಧಿಯನ್ನೂ ಗುರುತಿಸಲು ಕೇಳಬಹುದು.

ಆದ್ದರಿಂದ ಅಪರಾಧ ಶೋಧ ಶಾಸ್ತ್ರವು ಕಾನೂನಿಗೆ ಮತ್ತು ವೈಜ್ಞಾನಿಕ ಪ್ರಾಕೃತ ಪುರಾವೆಗಳನ್ನು ಗುರುತಿಸುವ, ಅವುಗಳಬೆಲೆಯನ್ನು ಕಂಡುಹಿಡಿಯುವ, ಅವುಗಳ ವ್ಯಕ್ತಿತ್ವವನ್ನು ಪ್ರತ್ಯೇಕಿಸುವ ಹಾಗೂ ಇವುಗಳ ಸಂಬಂಧ ಹಚ್ಚಿ ಅಪರಾಧಿ ಗಳನ್ನು ಕಂಡು ಹಿಡಿಯುವ, ಉದ್ಯಮವೆಂದು ಹೇಳಬಹುದು.

## ೩. ಅಪರಾಧ ಶೋಧ ಶಾಸ್ತ್ರದ ಇತಿಹಾಸ :

## (History of Forensic Science)

ಈ ಶಾಸ್ತ್ರ ಬೆಳೆದು ಬಂದ ವಿಧಾನ ಹಾಗೂ ಇದರ ಇತಿಹಾಸವನ್ನು ನೋಡೋಣ ಅಪರಾಧ ಶೋಧ ಶಾಸ್ತ್ರವು ಕಾನೂನು ಬದ್ಧವಾಗಿದೆ. ಕಾನೂನಿಗೆ ವಿರುದ್ಧವಾಗಿ ನಿತ್ಯ ನಡೆಯುತ್ತಿರುವ ಅನೇಕ ಅವ್ಯವಹಾರದ ಕೃತಿಗಳನ್ನು ತಿದ್ದಿ ಕೊಳ್ಳುವ ಕೆಲಸ ಸಮಾಜಕ್ಕೆ ಯಾವಾಗಲೂ ಇದ್ದೇ ಇದೆ. ಕಾನೂನು ಬದ್ಧ ಜೀವನವು ಸುಸಂಘಟಿತ ಸಮಾಜದ ಉಸಿರಾ ಗಿದೆ. ಕೆಟ್ಟ ಕೆಲಸಗಳಿಂದ ಮನಸ್ಸಿನ ಮೇಲೆ ಆಗುವ ಪರಿಣಾಮ

ಗಳನ್ನು ತೊಳೆದುಕೊಂಡು ಮನಸ್ಸನ್ನು ಸದಾ ಪ್ರಫುಲ್ಲವಾಗಿರಿಸಿ ಕೊಳ್ಳುವದು ಎಲ್ಲ ನಾಗರಿಕರ ಕರ್ತವ್ಯ. ಇದಕ್ಕೆ ಸಹಾಯಕ ವಾಗಿ ಈ ಶಾಸ್ತ್ರವು ಪ್ರಾಮಾಣಿಕವಾಗಿ, ಸುಸಂಬದ್ಧವಾಗಿ ಅಪ ರಾಧ ಶೋಧದ ಕಾರ್ಯವನ್ನು ಕೈಕೊಳ್ಳುತ್ತದೆ. ನಿಜವಾದ ಕಾರಣಗಳನ್ನು ಕಂಡುಹಿಡಿಯಲು ಹಗಲಿರುಳು ಶ್ರಮಿಸುತ್ತಿದೆ. ತನಗೆ ದೊರೆತ ಸಂಗತಿಗಳನ್ನೆಲ್ಲ ಇದ್ದಕ್ಕಿದ್ದಂತೆ ಬರೆದಿಟ್ಟು, ಸರಕಾರಕ್ಕೆ ಮುಖ್ಯವಾಗಿ ನ್ಯಾಯಾಲಯಕ್ಕೆ ತನ್ನ ವರದಿಯನ್ನು ವಿಚಾರಣೆಗೆ ಕಳಿಸುತ್ತದೆ. ಪ್ರಾಮಾಣಿಕ ಹಾಗೂ ನಿಕಷಕ್ಕೆ ಹತ್ತು ವಷ್ಟು ಘಟನೆಗೆ ಸರಿ ಇರುವ ಗುಣಗಳು ಅಪರಾಧ ಶೋಧ ಶಾಸ್ತ್ರಕ್ಕೆ ಬೇಕಾಗುವದು.

ಪೋಲೀಸರು ತಮ್ಮ ಕಾವಲನಿಂದ ಅಪರಾಧಗಳನ್ನು ತಡೆ ಯಲು ಸಮರ್ಥರಿರುವರೆಂದು ಹಿಂದೆ ಜನರು ತಾತ್ವಿಕವಾಗಿ ಭಾವಿಸಿದ್ದರು. ಅಲ್ಲದೆ ಅಪರಾಧಿಗಳನ್ನು ಹಿಡಿದು ಹಾಕಬಲ್ಲ ರೆಂದು ತಪ್ಪು ತಿಳುವಳಿಕೆ ಉಂಟಾಗುವಂತೆ ಸಮಾಜದ ಆಚಾರ ವಿಚಾರಗಳು ರೂಪುಗೊಂಡಿದ್ದವು. ಹೊಸ ಹೊಸ ಗಾಳಿ ಗೋಪುರ ಮಾರ್ಗಗಳು ಅಪರಾಧ ಶೋಧಕ್ಕೆ ಸಾಧಕಗಳೆಂದು ಭಾವಿಸಿದ ಜನರೂ ಹಿಂದೆ ಸಾಕಷ್ಟು ಪ್ರಮಾಣದಲ್ಲಿದ್ದರು. ಅಂತೆಯೇ ಶರಲಾಕ್ ಹೋಮ್ಸ್ (Sherlock Holms) ನಂತಹ ವ್ಯಕ್ತಿಗಳು ಹೆಸರಾದರು. ವೈಜ್ಞಾನಿಕ ಪುರಾವೆಗಳಿಂದ ಅಪರಾಧ ಶೋಧನೆಯನ್ನು ಶರಲಾಕ್ ಹೋಮ್ಸನೇ ಮೊದಲು ಪ್ರಾರಂಭಿಸಿದನೆಂದು ಹೇಳಬಹುದು. ಅವನ ಗಾಳಿಗೋಪುರ ವಿಚಾರಗಳು ಆಗ ಪ್ರಗತಿಯಾಗಿರಲಿಲ್ಲ. ಆದರೆ ಮುಂದೆ ವೃದ್ಧಿ

ಹೊಂದಿದವು. ಶರಲಾಕ್ ಹೋಮ್ಸನು ಕೂಡ ಊಹಿಸಲಾರದಂತಹ ಶೋಧನೆಯು ಪ್ರಾರಂಭವಾಯಿತು. ಆದ್ದರಿಂದಲೇ ನಾವು ಶರಲಾಕ್ ಹೋಮ್ಸನನ್ನು ಶಾಸ್ತ್ರೀಯ ಅಪರಾಧ ಶೋಧ ಶಾಸ್ತ್ರದ ಜನಕನೆಂದು ಕರೆಯಬಹುದು.

ವೊಡಾಕ (E. F. Vodocq) ಎಂಬವರೊಬ್ಬರು ಅಪರಾಧಿಗಳನ್ನು ಕಂಡು ಹಿಡಿಯಲು ಪ್ರಯತ್ನ ಪಟ್ಟರು. "ಕಳ್ಳನನ್ನು ಹಿಡಿಯಲು ಕಳ್ಳನನ್ನೇ ಹಚ್ಚು" ಎಂದು ಅವರು ಹೇಳಿದರು. "ಕಳ್ಳನ ಹೆಜ್ಜೆಯನ್ನು ಕಳ್ಳನೇ ಬಲ್ಲ" ಎಂಬ ನಾಣ್ಣುಡಿಯೂ ಇದಕ್ಕೆ ಸಮರ್ಥನೆ ಕೊಡುತ್ತದೆ. ಪ್ಯಾರಿಸ ನಗರದಲ್ಲಿ ಪೋಲೀಸ ಅಧಿಕಾರಿಗಳು ಕಳ್ಳರನ್ನು ಹಿಡಿಯಲು ಒಬ್ಬ ಕಳ್ಳನನ್ನು ನೇಮಿಸಿದರು. ಈ ಕಳ್ಳನ ಸಹಾಯದಿಂದ ಉಳಿದ ಕಳ್ಳರನ್ನು ಹಿಡಿದರು. ಒಂದೇ ಒಂದು ವರ್ಷದಲ್ಲಿ ಈ ಕಳ್ಳನು ತನ್ನ ಹನ್ನೆರಡು ಕಾವಲುಗಾರರೊಂದಿಗೆ ೮೦೦ ಕಳ್ಳರನ್ನು ಹಿಡಿದುಕೊಟ್ಟು ಪ್ರಸಿದ್ಧನಾದನು. ಹೊಸದಾಗಿ ಈ ರೀತಿ ಕಳ್ಳರನ್ನು ಹಿಡಿಯಲು ಸುರುವಾದರು. ಇವರಿಗೆ ಬೇರೆ ಹೆಸರನ್ನು ಕೊಟ್ಟು 'ಧೂತ' (Runners) ಎಂದು ಕರೆಯಲಾಯಿತು. ಸಮವಸ್ತ್ರ ಧರಿಸದೇ ಇವರು ನಾಗರಿಕರಂತೆ ಸಾದಾ ಪೋಷಾಕಿನಲ್ಲಿದ್ದು ತಾವು ಯಾರೆಂಬುದನ್ನು ತೋರಿಸಿಕೊಡದೇ ಕಳ್ಳರನ್ನು ಹಿಡಿಯುವ ಕೆಲಸ ಸುರುವು ಮಾಡಿದರು. ಸ್ಕಾಟಲಂಡ ಯಾರ್ಡದ ಸಾರ್ಜಂಟ ವಿಲಿಯಂ ಪಾಪಿ ಎಂಬವರು ಮೊದಲು ಇದಕ್ಕೆ ಮುಂದಾದನು. ಇದಕ್ಕನುಗುಣವಾಗಿ ೧೮೪೨ ರಲ್ಲಿ ಮೊದಲನೆಯ 'ಪತ್ತೆದಾರ ಪಡೆ' (Detective

**Force)** ಜನ್ಮ ತಾಳಿತು. ಆಗ ಪೋಲೀಸರು ಸಮವಸ್ತ್ರ ಧರಿಸುತ್ತಿದ್ದರಲ್ಲದೆ ಒಂದು ಚಿನ್ಹೆ ಅಥವಾ ಬ್ಯಾಚ ಕೂಡ ಅಂಟಿಸಿ ಕೊಳ್ಳುತ್ತಿದ್ದರು. ಸುಭವಾಗಿ ಇವರನ್ನು ಪೋಲೀಸರೆಂದು ಗುರುತಿಸುತ್ತಿದ್ದರು. ಇದರಿಂದ ಇವರಿಗೆ ಅಪರಾಧ ಶೋಧಕ್ಕೆ ಬೇಕಾಗುವ ಸಂಗತಿಗಳನ್ನು ಸಂಗ್ರಹಿಸುವದು ಬಹಳ ದುಸ್ತರ ವಾಯಿತು. ಇವರು ಆದೆಷ್ಟು ಸಮರ್ಥರಾಗಿದ್ದರೂ ಇವರು ಧರಿಸಿದ ಸಮವಸ್ತ್ರ ಇವರ ಕೆಲಸಕ್ಕೆ ಆತಂಕವಾಯಿತು. ನಂತರ ಸಾದಾ ಉಡುಪಿನವರನ್ನು ಕೆಲಸಕ್ಕೆ ನೇಮಿಸಿಕೊಳ್ಳಲಾಯಿತು.

ಈ ಸಮಯಕ್ಕೆ ಸರಿಯಾಗಿ ಅವತಾರ ತಾಳಿಬಂದ ತಂತಿಯು **(Telegraph)** ಸಾಧನವು ಇವರಿಗೆ ತುಂಬ ಸಹಾಯಕವಾಗಿ, ಓಡಿ ಪಾರಾಗಿ ಹೋಗುವ ಕಳ್ಳರನ್ನು ಬಂಧಿಸಲು ಸುಗಮ ವಾಯಿತು. ಅಪರಾಧಿಗಳನ್ನು ಗುರುತಿಸಲು ಛಾಯಾಚಿತ್ರ **(Photography)** ವು ಸಹಾಯಕ್ಕೆ ಬಂದಿತು. ಟಾಲ ಬೊಟ್ಟ **(Talbot)** ಎಂಬ ಆಂಗ್ಲ ಫೋಟೋ ತೆಗೆಯುವವನು ಈ ಕಲೆಯನ್ನು ಮೊದಲು ಉಪಯೋಗಿಸಿದನೆಂದು ಹೇಳ ಬಹುದು. ಪೋಲೀಸ ಆಫೀಸುಗಳಲ್ಲಿ ಈ ತರಹದ ಅಪರಾಧಿ ಗಳ ಫೋಟೋಗಳೇ ತುಂಬಿದವು. ಇದರ ಅನಾನುಕೂಲತೆ ಯಿಂದ ಫ್ರಾನ್ಸದ ಅಧಿಕಾರಿ ಬರ್ಟಿಲಾನ **(Bertillon)** ಎಂಬ ವರು ಮಾನವ ಶಾಸ್ತ್ರದ ಉಪಯೋಗದಿಂದ ಪ್ರತಿಯೊಬ್ಬ ಅಪ ರಾಧಿಗಳ ಆಕಾರ ಚಿತ್ರಿಸಿ ಅದರಿಂದ ಅಪರಾಧಿಗಳನ್ನು ಗುರುತಿ ಸುವ ಹೊಸ ಪದ್ಧತಿಯನ್ನು ಪ್ರಾರಂಭಿಸಿದನು.

೧೯ನೇ ಶತಮಾನದ ಮಧ್ಯದ ಅವಧಿಯಲ್ಲಿ ಎಲ್ಲ ವಿಜ್ಞಾನಗಳ ಪ್ರಗತಿಯು ನಾಗಾಲೋಟದಲ್ಲಿ ಸಾಗಿ, ಮುಂದುವರೆಯಿತು. ನೂರಾರು ವರ್ಷಗಳಿಂದ ಸತ್ಯ ಶೋಧನೆಯನ್ನು ಮಾಡುತ್ತಿದ್ದ ನ್ಯಾಯ ವಿಧಾನವು ವಿಜ್ಞಾನದ ಕಡೆಗೆ ತನ್ನ ಲಕ್ಷ್ಯವನ್ನು ಹೊರಳಿಸಿತು. ವಿಜ್ಞಾನಿಗಳು ವಿಧಿವಿಜ್ಞಾನದ ಬುನಾದಿಯನ್ನ ಭದ್ರವಾಗಿ ಹಾಕಲು ಪ್ರಾರಂಭಿಸಿದರು. ಶಾಸ್ತ್ರೀಯ ಉಪಕರಣಗಳನ್ನು ಉಪಯೋಗಿಸ ತೊಡಗಿದರು.

ಇಂದಿನ ಪೋಲಿಸ ಶಾಸ್ತ್ರವು ಮೂರು ಭಾಗಗಳಿಂದ ವಿಭಾಗಿಸಲ್ಪಟ್ಟಿದೆ. ಮೊದಲನೆಯದು ಇದ್ದ ಹಾಗೂ ಸತ್ತ ಅಪರಾಧಿಗಳನ್ನು ಗುರುತಿಸಿ ಪಾರುಪ್ಯತ್ವ ನೋಡುವುದು, ಎರಡನೆಯದು ತರಬೇತಿ ಪಡೆದ ನಿಪುಣ ತಜ್ಞರು ನಡೆಸಿರುವ ಉತ್ಖನನ ಕೆಲಸವಾಗಿದೆ, ಮೂರನೆಯದು ವಿಧಿವಿಜ್ಞಾನ ಪ್ರಯೋಗಾಲಯದಲ್ಲಿ ನಡೆಯುತ್ತಿರುವ ಶಾಸ್ತ್ರೀಯ ಸಂಶೋಧನೆಯು. ಪ್ರತ್ಯಕ್ಷ ಶೋಧವನ್ನು ಗೈದು ದೊರೆಕಿಸಿದ ಭೌತಿಕ ವಸ್ತುಗಳ ಗುಟ್ಟಿನ ಇಂಗಿತವನ್ನು ತಿಳಿದುಕೊಳ್ಳಲು ಪ್ರಯೋಗಶಾಲೆಯು ಪ್ರಯತ್ನಿಸುವದು. ಪ್ರತಿಯೊಂದು ಕುರುಹುವನ್ನು ವರೆಗೆ ಹಚ್ಚಿ, ಅದರ ಸತ್ಯಾಂಶದ ಶೋಧನೆಯು ಬಹಳ ಮಹತ್ವದ್ದಾಗಿದೆ. ಇದರಿಂದ ಅನೇಕ ಹೊಸ ರಹಸ್ಯಗಳು ಹೊರಬಂದು, ಅವುಗಳ ವಿಭಜನೆಗಳು ಅಪರಾಧಗಳನ್ನು ಪತ್ತೆ ಮಾಡಲಿಕ್ಕೆ ಬಹಳ ಸಹಾಯ ಮಾಡುವವು.

ಸೂಕ್ಷ್ಮವಾಗಿ ಅಪರಾಧ ಸ್ಥಳವನ್ನು ವೈಜ್ಞಾನಿಕ ದೃಷ್ಟಿಯಿಂದ ಪರೀಕ್ಷಿಸಿದರೆ ಅಪರಾಧದ ಎಲ್ಲ ಸಮಸ್ಯೆಗಳನ್ನೂ

ಸುಲಭವಾಗಿ ಬಿಡಿಸಬಹುದು. ಸತ್ತ ಹೆಣ ತನ್ನ ಕಥೆ ಹೇಳು ತ್ತದೆ. ಭೌತಿಕ ಮೂಕ ಸಾಕ್ಷಿಗಳು ನ್ಯಾಯಾಲಯದಲ್ಲಿ ಬಾಯಿ ಬಿಟ್ಟು ತಮ್ಮ ಕಥೆ ಹೇಳುತ್ತವೆ. ತಮ್ಮ ಗುಟ್ಟಿನ ಕಥೆಯ ನ್ನೆಲ್ಲ ತಮ್ಮ ಪ್ರದರ್ಶಕತನದಿಂದ ಇಲ್ಲವೆ ಇನ್ನೊಬ್ಬ ನಿಪುಣನು ಕೈಕೊಂಡ ವೈಜ್ಞಾನಿಕ ಪ್ರಯೋಗದಿಂದ ಮೂಕರಾದರೂ ಬಾಯಿ ಬಿಡಿಸಬಹುದು. ಇವುಗಳಿಗೆ ಅತ್ಯಾಧುನಿಕ ಯಂತ್ರೋಪಕರಣ ಗಳು ಈ ರೀತಿ ಪ್ರಯೋಗ ಕೈಕೊಳ್ಳಲು ಸಹಾಯಕವಾಗುತ್ತವೆ.

## ೪. ಅಪರಾಧ ಶೋಧ ಶಾಸ್ತ್ರದ ಕಾರ್ಯಗಳು :

## (Functions of Forensic Science)

ಈ ಶಾಸ್ತ್ರದ ಕಾರ್ಯಗಳು ೧) ಅಪರಾಧವು ಜರುಗಿರು ವದನ್ನು ಖಚಿತಪಡಿಸಿಕೊಳ್ಳುವದು. ೨) ಅಪರಾಧವಾದ ರೀತಿ ಮತ್ತು ಅದರ ವಿಶ್ಲೇಷಣೆ ಮಾಡುವದು ಹಾಗೂ ೩) ಅಪರಾಧಿ ಗಳನ್ನು ಗುರುತಿಸುವದು ಆಗಿರುತ್ತದೆ.

ಕೆಳಗಿನ ಮೂರು ಪ್ರಶ್ನೆಗಳಿಗೆ ಉತ್ತರವನ್ನು ಒದಗಿಸಿ ಕೊಡುತ್ತದೆ.

೧) ಅಪರಾಧವು ಜರುಗಿರುವದೋ ಹೇಗೆ?

ಅಪರಾಧ ಸಂಶೋಧನೆಯಲ್ಲಿ ಅತಿ ಮುಖ್ಯವಾದ ಪ್ರಾರಂ ಭದ ಸ್ಥಾನವು ಅಪರಾಧ ಸಂಭವಿಸಿದ ಸ್ಥಳವಾಗಿದೆ. ಅಪರಾಧ ವಾಗಿದೆಂದು ಖಚಿತಪಡಿಸಿಕೋಡೇ ಮುಂದಿನ ಕೆಲಸ ಪ್ರಾರಂಭ ಮಾಡಬೇಕಾಗುವದು. ತನಿಖಾಧಿಕಾರಿಯು ಇದನ್ನು ಗುರುತಿಸ

ದಿದ್ದರೆ, ಪುರಾವೆಗಳನ್ನು ಸರಿಯಾಗಿ ಸಂಗ್ರಹ ಮಾಡದಿದ್ದರೆ ಉಳಿದ ಸಾಧನಗಳು ಎಷ್ಟಿದ್ದರೂ ಉಪಯೋಗಕ್ಕೆ ಬರಲಾರವು. ಅಲ್ಲದೆ ತಜ್ಞರು ಇದಕ್ಕೆ ಪರಿಹಾರವನ್ನು ಕಂಡು ಹಿಡಿಯಲಾರರು. ತನಿಖೆದಾರ, ತಜ್ಞರು ಹಾಗೂ ನ್ಯಾಯಾಧೀಶರ ಮಧ್ಯದಲ್ಲಿರುವ ಅಂತರವನ್ನು ತುಂಬುವ ಅವಶ್ಯಕತೆಯು ಅತಿಯಾಗಿರುತ್ತದೆ. ಈ ಅಂತರಕ್ಕೆ ನಾವು ಭಾಷೆಯ ಸಂಪರ್ಕವೆಂದು ಹೇಳುವೆವು. ಅಪರಾಧಶೋಧದ ವಿಷಯದಲ್ಲಿ ದೊರೆಯುವ ಪುರಾವೆಗಳ ಮಹತ್ವವನ್ನು ಹಾಗೂ ಅದರ ಅರ್ಥವನ್ನು ತಜ್ಞನು ತರ್ಕ ಹಾಗೂ ವ್ಯವಹಾರ ಬುದ್ಧಿಗಳ ಸಹಕಾರದಿಂದ ಮಾತ್ರ ತಿಳಿದುಕೊಳ್ಳಬಲ್ಲನು. ಆದ್ದರಿಂದ ಈ ತಜ್ಞನಿಗೂ ನ್ಯಾಯಾಲಯದಲ್ಲಿ ಕುಳಿತಿರುವ ನ್ಯಾಯಾಧೀಶನಿಗೂ ಅಪರಾಧ ನಡೆದ ಸ್ಥಳದ ಸರಿಯಾದ ಕಲ್ಪನೆ ಮಾಡಿಕೊಡುವದು ಅತ್ಯವಶ್ಯವಾಗಿರುತ್ತದೆ. ಅದರ ಸ್ಪಷ್ಟ ಚಿತ್ರ ಅವರ ಕಣ್ಣು ಮುಂದೆ ಕಟ್ಟಿದಂತಾಗಬೇಕಾಗುತ್ತದೆ. ಅದಕ್ಕೆ ತನಿಖಾಧಿಕಾರಿಯು ಅಪರಾಧದ ಸ್ಥಳವನ್ನು ವಿವರವಾಗಿ ಬಣ್ಣಿಸಬೇಕಾಗುತ್ತದೆ. ಈ ವಿಷಯದಲ್ಲಿ ಛಾಯಾ ಚಿತ್ರದ ವಿಸ್ತೃತ ಚಿತ್ರಗಳು ಸರಿಯಾದ ಜ್ಞಾನವನ್ನು ಮಾಡಿಕೊಡಲು ಸಮರ್ಥ ಸಾಧನಗಳಾಗಿವೆ.

ಉದಾಹರಣೆಗಾಗಿ ಒಂದು ಮೃತ ದೇಹವನ್ನು ತೆಗೆದುಕೊಳ್ಳೋಣ. ಈ ಸಾವು ಸ್ವಾಭಾವಿಕವಾಗಿರಬಹುದು, ಅಕಸ್ಮಾತ್ ಸಾವಾಗಿರಬಹುದು, ಇಲ್ಲವೆ ಕೊಲೆಯಾಗಿರಬಹುದು. ಇದು ಅಪರಾಧವೆಂದು ಅಂದರೆ ಕೊಲೆಯೆಂದು ಮನವರಿಕೆ

ಮಾಡಿದ ನಂತರವೇ ಅಪರಾಧದ ಶೋಧನೆಯ ಕೆಲಸವು ಪ್ರಾರಂಭ ವಾಗಬೇಕಾಗುವದು. ದೇಹದ ಮೇಲಿನ ಗಾಯಗಳು, ರಕ್ತ, ಆಯುಧಗಳು ಇಲ್ಲವೆ ಇನ್ನಿತರ ಪುರಾವೆಗಳಿಂದ ಅಪರಾಧ ಆಗಿದೆ ಎಂದು ಖಚಿತಮಾಡಿಕೊಂಡು ತನಿಖೆ ಮುಂದುವರೆಯ ಬೇಕು.

೨) ಅಪರಾಧವು ಹೇಗೆ ಮತ್ತು ಯಾವಾಗ ಆಯಿತು ?

ಕೊಲೆಯಾದ ದೇಹದ ಪರೀಕ್ಷೆಯಿಂದ ಕೊಲೆ ಹೇಗಾಯಿ ತೆಂಬುದು ಹಾಗೂ ಯಾವಾಗ ಆಯಿತೆಂಬುದು ಗೊತ್ತಾಗುವ ದಲ್ಲದೇ ಕೊಲೆಯ ರಹಸ್ಯವನ್ನು ಕಂಡುಹಿಡಿಯಬಹುದು. ಅಪರಾಧ ಸ್ಥಳದ ಪರೀಕ್ಷೆಯಿಂದ, ಯಾವ ಆಯುಧಗಳಿಂದ ಹಾಗೂ ಅದರ ವಿವರಣೆಯನ್ನು ಗುರುತಿಸಬಹುದು. ಕಳುವು ಆಗಿದ್ದರೆ ಅಪರಾಧಿಯು ಒಳಹೊಕ್ಕ ವಿಧಾನಗಳು, ಉಪಯೋಗಿ ಸಿದ ಆಯುಧಗಳು ಹಾಗೂ ಅಲ್ಲಿ ಬಿಟ್ಟಂಥ ಕುರುಹುಗಳಿಂದ ಅದು ಹೇಗೆ ಜರುಗಿತು ಎಂಬುದನ್ನು ಗುರುತಿಸಬಹುದು.

ದೇಹದ ಉಷ್ಣತೆ ಹಾಗೂ ಅದು ತಣ್ಣಗಾಗುತ್ತ ಹೋಗುವ ಪ್ರಮಾಣ, ಸ್ನಾಯುಗಳು ಗಟ್ಟಿಯಾಗುವಿಕೆ, ಕೊಳೆಯುವಿಕೆ, ಸಣ್ಣ ಸಣ್ಣ ಕ್ರಿಮಿಗಳ ಉತ್ಪತ್ತಿ ಮತ್ತು ಬೆಳವಣಿಗೆಗಳು ಇತ್ಯಾದಿಗಳು ಸಾವು ಘಟಿಸಿದ ಸಮಯವನ್ನು ಸೂಚಿಸುವವು. ಒಂದು ವೇಳೆ ಅವನ ಕೈಯಲ್ಲಿಯ ಗಡಿಯಾರ ಅದೇ ವೇಳೆಗೆ ಬಂದಾಗಿರಬಹುದು. ಆಗ ನಾವು ಕೊಲೆಯಾದ ವೇಳೆ ಯನ್ನು ಗುರುತಿಸಬಹುದು. ಹೀಗೆ ನಾನಾ ಪ್ರಕಾರಗಳಿಂದ ಅಪರಾಧಗಳ ಸ್ಥಳಕ್ಕೆ ತಕ್ಕಂತೆ ಪರೀಕ್ಷೆ ಮಾಡಬಹುದು. ಶವ

ಪರೀಕ್ಷೆಯಿಂದ ಹೊರಳಿಸಿದ್ದ ಶವದ ದೇಹ, ಅದರ ಮೊದಲಿನ ಸ್ಥಿತಿ. ಜೀವಂತ ಗಾಯಗಳು ಮರಣೋತ್ತರ ಗಾಯಗಳು ಹಾಗೂ ಮಾಡಿರಬಹುದಾದ ಆಯುಧಗಳು ಇತ್ಯಾದಿಗಳನ್ನು ಗುರುತಿಸಬಹುದು.

**ಆತ್ಮಹತ್ಯೆ :** ಗಂಟಲು, ಎಡಭಾಗದ ಎದೆ. ಹೃದಯ ಹತ್ತಿರ ಚೂರಿಯಿಂದ ಇರಿದುಕೊಂಡಾಗಲೀ ಇಲ್ಲವೆ ಗುಂಡು ಹಾರಿಸಿಕೊಂಡಾಗಲೀ, ಈ ತರಹ ಸಾಮಾನ್ಯವಾಗಿ ಆತ್ಮಹತ್ಯೆ ಗಳು ಸಂಭವಿಸುತ್ತವೆ. ಹೀಗೆ ಮಾಡಿಕೊಂಡಾಗ ಸಾಧಾರಣ ವಾಗಿ ಚೂರಿ ಇಲ್ಲವೆ ಪಿಸ್ತೂಲು ಮೃತನ ಮುಷ್ಠಿಯಲ್ಲಿ ಗಟ್ಟಿ ಯಾಗಿ ಸಿಕ್ಕಿಕೊಂಡಿರುತ್ತದೆ. ಯಾಕೆಂದರೆ ಒಮ್ಮೆಲೆ ಸ್ನಾಯು ಗಳು ಬಿಗಿದುಕೊಂಡು ಸತ್ತ ನಂತರವೂ ಹಾಗೆಯೇ ಉಳಿಯು ತ್ತವೆ. ಹೀಗಾಗಿದ್ದರೆ ಅದು ಖಂಡಿತವಾಗಿಯೂ ಆತ್ಮಹತ್ಯೆಯು. ಚಾಕುವಿನಿಂದ ಕುತ್ತಿಗೆ ಕೊಯ್ದುಕೊಂಡು ಆತ್ಮಹತ್ಯೆ ಮಾಡಿ ಕೊಳ್ಳುವಾಗ ಮೊದ ಮೊದಲು **ಅನುಮಾನಿಸುತ್ತ ಒಂದೆರಡು** ಸಲ ಟ್ರಾಯಲ್ ಮಾಡಲು ಹೋದಾಗ ಅದರ ನೋವಿನಿಂದ ಹೆದರಿರುವನು. ಅನಂತರ ಜೀವಗಟ್ಟಿ ಮಾಡಿ ಒಮ್ಮೆಲೆ ಕುತ್ತಿಗೆ ಕೊಯ್ದುಕೊಳ್ಳಬಹುದು. ಹೀಗೆ ಅನುಮಾನಿಸುತ್ತ ಮಾಡಿ ಕೊಂಡ ಟ್ರಾಯಲ್ ಗುರುತುಗಳು ಆತ್ಮಹತ್ಯೆಯ ಕುರುಹು ಗಳಿಂದು ಹೇಳಬಹುದು. ನೇಣು ಹಾಕಿಕೊಂಡಿದ್ದರೆ ಹಗ್ಗದ ರೀತಿ, ಅವಸ್ಥೆಯಿಂದ ಹಾಗು ಹೆಣದ ಅವಸ್ಥೆಯಿಂದ ಆತ್ಮಹತ್ಯೆ ಯನ್ನು ಗುರುತಿಸಬಹುದು.

**ಆಕಸ್ಮಿಕ ಸಾವು :** ಎತ್ತರದಿಂದ ಚೂಪಾದ ಏಣಿ ಯಂತಹ ಇಲ್ಲವೆ ದೊಡ್ಡ ಮೊಳೆಯ ಮೇಲೆ ಬಿದ್ದಿದ್ದರೆ, ಮುಹ

ತ್ವದ ಇಂದ್ರಿಯಗಳಿಗೆ ನೆಟ್ಟು ಸಾಯಬಹುದು. ಈ ತರಹದ ಮೈಮೇಲಿನ ಗಾಯಗಳಿಂದ ಹಾಗು ಇನ್ನಿತರ ಪರೀಕ್ಷೆಗಳಿಂದ ಆಕಸ್ಮಿಕ ಸಾವನ್ನು ಗುರುತಿಸಬಹುದು.

**ಕೊಲೆ :** ದೊಡ್ಡ ದೊಡ್ಡ ಗಾಯಗಳಿಂದಾಗುವ ಭೀಕರ ಗಾಯಗಳು ವ್ಯಕ್ತಿಯ ದೇಹದ ಕೈಗೆ ನಿಲುಕದ ಜಾಗಗಳಲ್ಲಿ ಆಗಿದ್ದರೆ ಅದು ಖಂಡಿತವಾಗಿಯೂ ಕೊಲೆಯು. ಆತ್ಮಹತ್ಯೆ ಇಲ್ಲವೆ ಆಕಸ್ಮಿಕ ಸಾವು ಅಲ್ಲದಿದ್ದರೆ ಅದು ಕೊಲೆಯೆಂದು ತಿಳಿಯಬಹುದು. ಕೊಲೆಗೀಡಾದ ಆತ್ಮರಕ್ಷಣೆಗೆ ಹೋರಾಡುವದು ಸಹಜ. ಆಗ ಕೈಬೆರಳು, ಅಂಗೈ, ಮುಂಗೈ ತೋಳುಗಳ ಹೊರಭಾಗ, ಇಂಥಲ್ಲಿ ಗಾಯಗಳು ಆಗುವವು. ಈ ತರಹದ ಗಾಯಗಳು ಕೊಲೆಯಿಂದಾಗಿವೆ ಎಂದು ಹೇಳಬಹುದು. ಕೊರಳಿನ ಮೇಲೆ ಕೈಬೆರಳಿನ ಗುರುತುಗಳು (ಉಗುರಿನ) ಇದ್ದರೆ ಕತ್ತು ಹಿಚುಕಿ ಕೊಂದಿರಬಹುದು ಎಂದು ಊಹಿಸಬಹುದು. ಹೀಗೆ ನಾನಾ ತರದ ಪರೀಕ್ಷೆಗಳಿಂದ ಕೊಲೆಯನ್ನು ಗುರುತಿಸಬಹುದು.

ಖ) ಅಪರಾಧವನ್ನು ಮಾಡಿದವರಾರು ?

ವೈಯಕ್ತಿಕ ಸಂಕೇತಗಳಾದ ಬೆರಳಚ್ಚುಗಳು, ಹೆಜ್ಜೆಗುರುತುಗಳು, ರಕ್ತ, ಕೂದಲು, ಹಸ್ತಾಕ್ಷರಗಳು, ಗುಂಡುಗಳು ಅರಿವೆಗಳು, ಹಾಗೂ ಆಯುಧಗಳು ಅಪರಾಧಿಯನ್ನೂ ಗುರುತಿಸಲು ಸಹಾಯ ಮಾಡುತ್ತವೆ. ಅಪರಾಧ ಸಂಭವಿಸಿದ ಸ್ಥಳಕ್ಕೂ, ಅಪರಾಧಿಗೂ ಇದ್ದ ಸಂಬಂಧವನ್ನು ಅಲ್ಲಿ ದೊರಕಿದ ಉಪಕರಣಗಳ ವೈಜ್ಞಾನಿಕ ಪರೀಕ್ಷಣದಿಂದ ಜೋಡಿಸಬಹುದು. ಅಪರಾಧ ನಡೆದ ಸ್ಥಳದಲ್ಲಿ ಸಿಕ್ಕಂತಹ ವಸ್ತುಗಳು ಅಪರಾ

ಯುವಾಗಿದ್ದರೆ ತಿರುಗಿ ಅವನನ್ನು ಕರೆ ತರುತ್ತವೆ, ಅಥವಾ ಅಪರಾಧ ನಡೆದ ಸ್ಥಳದಲ್ಲಿದ್ದ ವಸ್ತುಗಳು ಅವನಲ್ಲಿ ಇಲ್ಲವೆ ಅವನ ಪರಿಸರದಲ್ಲಿ ಸಿಕ್ಕರೆ, ಅವನು ಅಪರಾಧ ನಡೆದ ಸ್ಥಳಕ್ಕೆ ಬೆಟ್ಟಿಕೊಟ್ಟಿದ್ದನೆಂದು ಸಿದ್ಧಮಾಡಬಹುದು.

ವಾಹನಗಳ ಅಪಘಾತಗಳಲ್ಲಿ ಹೆಟ್‌ಲೈಟ ಗ್ಲಾಸುಗಳು ಸಾಮಾನ್ಯವಾಗಿ ಒಡೆದಿರುತ್ತವೆ. ಅಪಘಾತಕ್ಕೀಡಾದ ವಾಹನ ಓಡಿ ಹೋಗಿರಬಹುದು. ಆ ವಾಹನದ ಚಾಲಕ ತಾನು ಆಗ ಪಾರಾದೆನೆಂದು ತಿಳಿದಿರಬಹುದು. ಆದರೆ ವಾಹನವನ್ನು ಸರಿಯಾಗಿ ಪರೀಕ್ಷಿಸಿದಾಗ ಒಡೆದ ಗ್ಲಾಸುಗಳ ಸಹಾಯದಿಂದ ಅದೇ ವಾಹನವು ಅಪಘಾತಕ್ಕೀಡಾಗಿದೆಯೆಂದೂ. ಆ ವಾಹನದ ಚಾಲಕನೇ ಅಪರಾಧಿಯೆಂದು ಸಾಬೀತು ಮಾಡಬಹುದು.

ಇದಕ್ಕೆ ಬದಲಾಗಿ, ಕಂಡು ಹಿಡಿದ ಕರುಹುಗಳು ಅಪರಾಧ ನಡೆದ ಸ್ಥಳದೊಂದಿಗೆ ಹಾಗೂ ಅಪರಾಧಿಯೆಂದು ಶಂಕಿಸಿದ ವ್ಯಕ್ತಿಗೂ ಯಾವ ಸಂಬಂಧವನ್ನು ಜೋಡಿಸಲು ಅಸಮರ್ಥವಾದರೆ ಶಂಕಿಸಿದ ವ್ಯಕ್ತಿಯು ನಿರಪರಾಧಿಯೆಂದು ಸಿದ್ಧ ಮಾಡಬಹುದು. ಅಪರಾಧ ಶೋಧ ಶಾಸ್ತ್ರವು ಈ ರೀತಿ ನಿರಪರಾಧಿಗಳಿಗೆ ನೆರವಾಗುತ್ತದೆ.

ಅಪರಾಧಕ್ಕೆ ಸಂಬಂಧಿಸಿದ ಸಾಮಗ್ರಿಗಳೆಲ್ಲ ಅದನ್ನು ಮಾಡಿರಬಹುದೆಂದು ಸಂಶಯದಿಂದ ತರ್ಕಿಸಿದ ವ್ಯಕ್ತಿ ಮತ್ತು ಘಟನೆಗಳಿಂದ ಶೋಧನೆ ಆರಂಭವಾಗುತ್ತದೆ. ಅಪರಾಧಗಳನ್ನು ಮಾಡುವವರು ಮನುಷ್ಯರಲ್ಲದೆ ಬೇರೆ ಯಾರೂ ಅಲ್ಲ. ಆದರೆ ಅವರು ಎಲ್ಲ ಪ್ರಸಂಗಗಳಲ್ಲಿ ಒಂದಿಲ್ಲೊಂದು ಉಪಕರಣ

ಗಳನ್ನು ಉಪಯೋಗಿಸುವರು. ಈ ಉಪಕರಣಗಳೇ ಸ್ಥೂಲ ಪುರಾವೆಗಳಾಗುವವು.

### ಅಪರಾಧ←ಉಪಕರಣಗಳು→ಅಪರಾಧಿ

ತಾನು ಕಾಣಿಸಿಕೊಳ್ಳಬಾರದೆಂದು ಅಪರಾಧಿಯು ಅದೆಷ್ಟು ಜಾಗೃತನಾಗಿರಬಹುದು. ತನ್ನ ಧ್ವನಿಯನ್ನಾರೂ ಕೇಳಬಾರದೆಂದು ಮೌನದಿಂದಲೂ ಇರಬಹುದು. ಆದರೆ ಪರಿಸರದೊಂದಿಗೆ ಅನಿವಾರ್ಯವಾಗಿ ಬರುವ ಸಂಪರ್ಕವನ್ನು ಅವನು ತಡೆ ಹಿಡಿಯಲು ಅಸಮರ್ಥನಾದರೆ ಅವನ ಉಳಿದೆಲ್ಲ ಪ್ರಯತ್ನಗಳು ವ್ಯರ್ಥವಾದಂತೆ. ಈ ಪರಿಸರದ ಸಂಪರ್ಕ ಸಂಜ್ಞೆಗಳು ಅವನನ್ನು ಗೊತ್ತು ಹಚ್ಚಲು ಬಹಳ ಸಹಾಯ ಮಾಡುವವು. ಅವನು ಅತ್ತಿತ್ತ ನಡೆದಾಡಿದಾಗ, ಯಾವದೇ ವಸ್ತುವನ್ನು ಮುಟ್ಟಿದಾಗ, ಇಲ್ಲವೆ ಯಾವುದೇ ವಸ್ತುವು ಅವನೊಂದಿಗೆ ಹೋದಾಗ ಈ ವಸ್ತುಗಳೆಲ್ಲ ಅವನನ್ನು ಹಿಡಿದು ಕೊಡಲು ಸಹಾಯಕವಾಗುತ್ತವೆ. ಈ ತರಹದ ಎಲ್ಲ ವಸ್ತುಗಳೂ ಸೇರಿಕೊಂಡು ಇಡಿಯಾಗಿ ಆಗಲಿ, ಬಿಡಿಯಾಗಿ ಆಗಲಿ, ಮೌನ ಪುರಾವೆಗಳಾಗುತ್ತವೆ. ಮಾನವ ಸಾಕ್ಷಿಗಳಿಗಿಂತ ಈ ಪುರಾವೆಗಳು ಹೆಚ್ಚು ಉಪಯುಕ್ತವಾಗುತ್ತವೆ. ಮಾನವರು ಇರದ ಜಾಗಗಳಲ್ಲಿ ಕೂಡ ಸದಾ ಇರುವ ಅವಿಶ್ರಾಂತ ಶ್ರಮಿಸುವ ಪುರಾವೆಗಳು ಇವಾಗಿವೆ.

ಮಾನವ ಸಾಕ್ಷಿಗಳಿಲ್ಲದೇ ಕೇವಲ ಈ ಪುರಾವೆಗಳಿಂದಲೇ ಅಪರಾಧಿಯನ್ನು ಶಿಕ್ಷಿಸಬಹುದು.

ಉದಾಹರಣೆ: ಆಗ ಪಂಜಾಬದಲ್ಲಿ ಕೊಲೆ ಹಾಗೂ ಮಾನಾಪಹರಣ ಕೌರ್ಯ ಅತಿಯಾಗಿತ್ತು. ಅದೊಮ್ಮೆ ಓರ್ವ ಮಹಿಳೆಯ ಮಾನಭಂಗ ಮಾಡಿದಾಗ ಆ ಮಹಿಳೆ ಮೃತ್ಯು ಪ್ರಾಯವಾಗಿ ಬಿದ್ದಾಗ ಅಪರಾಧಿಗಳು ಓಡಿಹೋಗಿದ್ದರು. ಉಡಿಗೆ ತೊಡಿಗೆಯಿಲ್ಲದೇ ಅಸ್ತವ್ಯಸ್ತವಾಗಿ ಆಕಾಶ ದಿಟ್ಟಿಸುತ್ತ ಬಿದ್ದ ಆ ದೇಹದ ಮೇಲಾಗಲೀ, ಸುತ್ತಾಗಲೀ ಅಪರಾಧಿಗಳು ಕುರುಹುಗಳನ್ನು ಬಿಡದೇ ಪಲಾಯನ ಮಾಡಿದ್ದರು.

ಪೋಲೀಸರು ಅನಂತರ ಸ್ಥಳಕ್ಕಾಗಮಿಸಿ ಮೃತ ದೇಹವನ್ನು ಪರೀಕ್ಷೆಗೆ ಕಳಿಸಿದರು. ಆಗ ತಜ್ಞರು ಹೇಳಿದ ಅಭಿಪ್ರಾಯದ ಪ್ರಕಾರ, ಮಾನಭಂಗದ ಆಘಾತವನ್ನು ತಡೆಯಲಾಗದೇ ಸತ್ತಿದ್ದು ಮತ್ತು ಮುಷ್ಠಿಯಲ್ಲಿ ಸಿಕ್ಕ ಕೆಲವು ಕೂದಲುಗಳ ಸಹಾಯದಿಂದ ಅಪರಾಧಿಗಳನ್ನು ಶೋಧಿಸಬಹುದು ಎಂದು ಹೇಳಿದರು. ಆಗ ಪೋಲೀಸರು ಸಂಶಯಿತ ಏಳ ಜನರನ್ನು ಬಂಧಿಸಿದರು. ಅವರ ತಲೆ ಹಾಗೂ ಮೈಮೇಲಿನ ಕೂದಲುಗಳನ್ನು ಹಾಗೂ ಮಹಿಳೆಯ ಕೈಯಲ್ಲಿದ್ದ ಕೂದಲುಗಳನ್ನು ವಿಧಿವಿಜ್ಞಾನ ಪ್ರಯೋಗಾಲಯಕ್ಕೆ ಕಳುಹಿಸಿದರು. ಅವು ಸರಿ ಹೊಂದಲಿಲ್ಲ. ಅವರಲ್ಲಿ ಮೂವರು ದಾಡೀ ಬಿಟ್ಟಿದ್ದ ಸರ್ದಾರಜಿಗಳಾಗಿದ್ದರು. ಪೋಲೀಸರು ಆ ಮೂವರ ಕೂದಲುಗಳನ್ನು ಪರೀಕ್ಷೆಗೆ ಕಳಹಿಸಿದರು. ಆ ಮೂವರಲ್ಲಿ ಒಬ್ಬನ ಕೂದಲುಗಳು ಮೃತಳ ಕೈಯಲ್ಲಿ ಸಿಕ್ಕ ಕೂದಲುಗಳು ಎಂದು ತಜ್ಞರು ಅಭಿಪ್ರಾಯಪಟ್ಟರು. ಕೂಲಂಕಷವಾಗಿ ಪೋಲೀಸರು ವಿಚಾರಿಸಿದಾಗ ಆ ಸರದಾರಜಿಯೇ ಅಪರಾಧಿಯಾಗಿದ್ದ ವಿಚಿತ್ರವೆಂದರೆ ಸಾಧಾರಣ

ವಾಗಿ ಎಲ್ಲ ಮಾನವರಲ್ಲಿ ಒಂದೇ ಒಂದು ಮೆಡುಲಾ (Medulla) ಇರುತ್ತದೆ. ಆದರೆ ಈತನಲ್ಲಿ ಎರಡು ಮೆಡುಲಾಗಳು ಇದ್ಧದ್ದರಿಂದ ಆ ಕೂದಲು ಈತನದೇ ಎಂದು ಸ್ಪಷ್ಟವಾಗಿ ಖಚಿತವಾಗಿ ಹೇಳಲು ಸಾಧ್ಯವಾಯಿತು. ಹಾಗೂ ಅಪರಾಧಿಯನ್ನು ಶಿಕ್ಷಿಸಲು ಸಾಧ್ಯವಾಯಿತು.

## ೫. ಅಪರಾಧಶೋಧ ಶಾಸ್ತ್ರದ ಮೊದಲಿನ ಮಾರ್ಗದರ್ಶಕ ವಿಜ್ಞಾನಿಗಳು :

(Pioneer Scientists)

ಕಳ್ಳರ ಸಹಾಯದಿಂದ ಕಳ್ಳರನ್ನು ಹಿಡಿದು ಶಿಕ್ಷಿಸುವದು ಹಿಂದಿನ ಕಾಲದಲ್ಲಿ ಸಾಧ್ಯವಿತ್ತು. ಮುಂದೆ ತಾಂತ್ರಿಕ ಹಾಗೂ ಔದ್ಯೋಗಿಕ ಕಾಲದಲ್ಲಿ ಕಳ್ಳರನ್ನು ಹಿಡಿಯುವದು ದಿನ ದಿನಕ್ಕೆ ದುಸ್ತರವಾಗತೊಡಗಿತು. ಯಾಕೆಂದರೆ ಕಾಲ ಕಳೆದಂತೆ ಅಪರಾಧಿಗಳೂ ಕೂಡ ಆಧುನಿಕ ಉಪಕರಣಗಳನ್ನು ಉಪಯೋಗಿಸತೊಡಗಿದರು. ಜನಸಂಖ್ಯೆ, ಔದ್ಯೋಗಿಕತೆ, ತಾಂತ್ರಿಕತೆ ಬೆಳೆದಂತೆ ಅಪರಾಧಗಳು ವೃತ್ತಿಗಳಾಗತೊಡಗಿದವು. ಪೋಲಿಸರ ಕಣ್ಣಿಗೆ ಬೀಳದಂತೆ ಹೆಚ್ಚು ಜಾಗ್ರತೆ ವಹಿಸತೊಡಗಿದರು. ಕೇವಲ ಸಾಕ್ಷಿಗಳನ್ನು ಕೊಡುವ ಜನರಿಂದ ಅಪರಾಧದ ವಿವರಗಳು ಸಾಲದಾದವು. ಇದರಿಂದ ಹೊಸ ವೈಜ್ಞಾನಿಕ ಸಾಧನಗಳನ್ನು ಕುಂಡುಹಿಡಿದು ಅಪರಾಧಗಳನ್ನು ಪತ್ತೆ ಮಾಡುವದಕ್ಕೆ ವಿಜ್ಞಾನಿಗಳಿಗೆ ಅನಿವಾರ್ಯವೆಂದು ಕಂಡು

ಬಂದಿತು. ಅಪರಾಧ ನಡೆದ ಸ್ಥಳದಲ್ಲಿ ದೊರೆತ ಸಣ್ಣ ದೊಡ್ಡ ವಸ್ತುಗಳ ವಿಶ್ಲೇಷಣೆಯಿಂದ ಅಪರಾಧಿಗಳನ್ನು ಕಂಡು ಹಿಡಿಯುಲಿಕ್ಕೆ ಬರಬಹುದೆಂದು ವಿಜ್ಞಾನದ ಮೊರೆ ಹೊಕ್ಕರು.

ಅಲ್ಫಾನ್ಸೊ ಬರ್ಟಿಲಾನ (Alphonse Bertillon) ಎಂಬವನು ಪ್ಯಾರಿಸನಲ್ಲಿ ಅಪರಾಧಿಗಳನ್ನು ಗುರುತಿಸುವ ಪೋಲೀಸ ಶಾಖೆಯಲ್ಲಿ ಕಾರಕೂನನಾಗಿದ್ದನು. ಪೋಲಿಸರಿಗೆ ಬೇಕಾಗಿರುವ ಹಾಗೂ ಅಪರಾಧಿಗಳೆಂದು ಕಂಡು ಬಂದ ವ್ಯಕ್ತಿಗಳನ್ನು ಗುರುತು ಹಿಡಿಯುವದು ಬಹಳ ಕಠಿಣ ಸಮಸ್ಯೆಯಾಗಿದೆಯೆಂದು ಈತನು ಬೇಗನೆ ತಿಳಿದುಕೊಂಡನು. ಮೊದಲು ಉಪಯೋಗಿಸುತ್ತಿದ್ದ ಛಾಯಾಚಿತ್ರ ತಂತ್ರವು ಈ ಸಮಸ್ಯೆಯನ್ನು ಬಗೆಹರಿಸಲಿಲ್ಲ. ಈ ಸಂದರ್ಭದಲ್ಲಿ ಬರ್ಟಿಲಾನನು ಮುಂದೆ ಬಂದು ಹೊಸದೊಂದು ವಿಧಾನವನ್ನು ಕಂಡು ಹಿಡಿದನು. ಕುಟೆಲೆಟ (Quetelet) ನಿಯಮದ ಸಹಾಯ ತಕ್ಕೊಂಡು ಒಬ್ಬನ ದೇಹದ ಆಕೃತಿ ಇನ್ನೊಬ್ಬನ ಹಾಗೆ ಇರುವದಿಲ್ಲ ಎಂದು ತೋರಿಸಿಕೊಟ್ಟನು. ಪೋಲೀಸರಿಗೆ ಬೇಕಾದ ಹಾಗೂ ಅಪರಾಧಿಗಳ ದೇಹ, ಮುಖ ಮುಂತಾದವುಗಳ ವರ್ಣನೆಯನ್ನು ಚಿತ್ರಿಸಿ ಅದರಿಂದ ಅಪರಾಧಿಗಳನ್ನು ಗುರುತಿಸಲು ಸಹಾಯ ಮಾಡಿದನು. ಪೋಲೀಸರಿಗೆ ಬೇಕಾದ ವ್ಯಕ್ತಿಗಳ ಶಾರೀರಿಕ ವರ್ಣನೆ, ಅವಯವಗಳ ಉದ್ದ ಅಗಲಗಳು ಮುಂತಾದವುಗಳನ್ನು ಬರೆದಿಟ್ಟು ಅವುಗಳ ಮೂಲಕ ವೈಜ್ಞಾನಿಕವಾಗಿ ಮೊಟ್ಟ ಮೊದಲು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಯನ್ನು ಗುರುತಿಸಲು ಈತನ ಪದ್ಧತಿಯು ಬಹಳ ನೆರವಾಯಿತು. ಈ

ಪದ್ಧತಿಯೇ 'ಪೋರ್ಟರೇ ಟಪಾರ್ಲೆ' (Portrait parle) ಎಂದು ಪ್ರಸಿದ್ಧವಾಯಿತು.

**ಬೆರಳಚ್ಚುಗಳು (Finger prints) :** ಸಾವಿರ ವರ್ಷಗಳ ಹಿಂದೆ ಚೀನಿ ಜನರು ತಮ್ಮ ಕಾನೂನು ಪತ್ರಗಳ ಮೇಲೆ ಬೆರಳಚ್ಚುಗಳನ್ನು ತೆಗೆದುಕೊಳ್ಳುತ್ತಿದ್ದರೆಂದು ಹೇಳಲು ಪುರಾವೆಗಳಿವೆ. ಈ ಪ್ರಕಾರ ಬೆರಳಚ್ಚು ತೆಗೆದುಕೊಳ್ಳುವದೆಂದರೆ ಅವರು ಆ ಕಾಗದದ ಮೇಲೆ ತಮ್ಮ ಸಹಿ ಮಾಡಿದಂತೆ ಅಥವಾ ಅಂಕಿತ ಹಾಕಿದಂತೆ ಅಂತಾ ತಿಳಿದುಕೊಳ್ಳುತ್ತಿದ್ದರು. ಆದರೆ ಅದು ಕೇವಲ ಅಲಂಕಾರವಾಗಿತ್ತೋ ಅಥವಾ ವೈಯಕ್ತಿಕ ಪರಿಯಾತ್ಮಕ ನಿರ್ಧಿಷ್ಟ ನಿದರ್ಶನವಾಗಿತ್ತೋ ಎಂಬುದು ಇತಿಹಾಸವು ಕಳೆದುಕೊಂಡ ವಿಷಯವಾಗಿದೆ.

ಕೈಬೆರಳಿನ ಅಚ್ಚನ್ನು ತೆಗೆದುಕೊಳ್ಳುವ ಕ್ರಮವನ್ನು ಭಾರತದಲ್ಲಿ ವಿಲಿಯಂ ಹರಶೆಲ್ (William Hershel) ಎಂಬವರು ಮೊದಲು ಪ್ರಾರಂಭಿಸಿದರೆಂದು ಹೇಳಬಹುದು. ಭಾರತೀಯರು ತಮ್ಮ ಎಲ್ಲ ಒಡಂಬಡಿಕೆಯ ಕಾನೂನು ಪತ್ರಗಳ ಮೇಲೆ ಬಲಗೈ ಅಚ್ಚನ್ನು ಮೂಡಿಸಿಕೊಳ್ಳಲು ಪ್ರಾರಂಭಿಸಿದರು. ಒಂದು ಗಾದೆಯಂತೆ ಪ್ಯಾಡನ್ನು ಉಪಯೋಗಿಸುತ್ತಿದ್ದರು. ಹರಶೆಲ್ ಅವರ ಉದ್ದೇಶವೇನಿತ್ತೆಂದು ಈ ವರೆಗೂ ಗೂಢವಾಗಿಯೇ ಉಳಿದಿದೆ. ಕೈಯಚ್ಚನ್ನು, ವ್ಯಕ್ತಿಯನ್ನು ಗುರುತಿಸುವ ಉದ್ದೇಶದಿಂದ ತೆಗೆದುಕೊಂಡನೋ ಅಥವಾ ಭಾರತೀಯ ಪವಿತ್ರ ಪರಂಪರೆಯ ಪ್ರಕಾರ ಅವರು ತಮ್ಮ ದೇಹದ ಗುರುತು ಅಥವಾ ಕೈಗಳಿಂದ ತಮ್ಮ ಚಾರಿತ್ರ್ಯಕ್ಕೆ ಇಲ್ಲವೆ ಪ್ರಾಮಾಣಿಕತನಕ್ಕೆ

ಕೊಡುವ ಬೆಲೆಯನ್ನು ಕೊಡುವರೋ ಎಂಬ ಭಾವನೆಯಿಂದ ತೆಗೆದುಕೊಳ್ಳುತ್ತಿದ್ದನೋ ಎಂಬುದು ತಿಳಿಯದು. ಅಂಕಿತ ಹಾಕುವದಕ್ಕಿಂತ ಕೈಯಚ್ಚು ಒತ್ತುವದು ಹೆಚ್ಚು ಮಹತ್ವದ್ದು ಎಂಬ ಭಾವನೆ ಭಾರತೀಯರಲ್ಲಿರಬಹುದೆಂದು ಹರಶಲ್ ಊಹಿಸಿರಬಹುದು. ಆದರೆ ಅವನು ಈ ವಿಷಯಗಳ ಬಗ್ಗೆ ಏನನ್ನೂ ಬರೆದಿಟ್ಟಿಲ್ಲ.

ಮುಂದೆ ಕೆಲದಿನಗಳಲ್ಲಿ ಹೆನ್ರಿ ಫೌಲ್ಡ (Henry Fould) ಎಂಬ ಸ್ಕಾಟ ವೈದ್ಯನು ಜಪಾನಿನಲ್ಲಿ ಕೈಬೆರಳುಗಳ ಅಚ್ಚಿನಿಂದ ವ್ಯಕ್ತಿಯನ್ನು ಪ್ರತ್ಯೇಕವಾಗಿ ಗುರುತಿಸಲು ತಕ್ಕ ಸಾಧನವಾಗಬಹುದೆಂದು ೧೮೮೦ ರಲ್ಲಿ ಪ್ರಕಟಿಸಿದನು. ಚರ್ಮದ ಮೇಲಿನ ಗೆರೆಯ ನಮೂನೆಗಳ ಗುರುತುಗಳು ಅಪರಾಧಿಯನ್ನು ಪತ್ತೆ ಹಚ್ಚುವದರಲ್ಲಿ ಉಪಯೋಗವಾಗುವವೆಂದು ಈತನು ಸೂಚಿಸಿದನು.

ನಂತರ ಹೆನ್ರಿ ಗಾಲ್ಟನ್ (Henry Galton) ಎಂಬ ಆಂಗ್ಲನು "ಬೆರಳಚ್ಚುಗಳು" (Finger prints) ಎಂಬ ಗ್ರಂಥವನ್ನು ಪ್ರಕಟಿಸಿ, ಬೆರಳಚ್ಚುಗಳ ಶಾರೀರಿಕ ವಿವೇಚನೆಯನ್ನು ಮಾಡಿದನು. ಅವುಗಳನ್ನು ವರ್ಗೀಕರಿಸಿ ಅಪರಾಧಿಗಳನ್ನು ಹಾಗೂ ವ್ಯಕ್ತಿಗಳನ್ನು ಹೇಗೆ ಗುರುತಿಸಬಹುದು ಎಂಬುದನ್ನು ಸೂಚಿಸಿದನು.

೧೯೦೦ರಲ್ಲಿ ಈ ಬೆರಳಚ್ಚುಗಳ ಶಾಸ್ತ್ರವನ್ನು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಬೆರಳಚ್ಚುಗಳನ್ನು ಶಾಸ್ತ್ರೀಯವಾಗಿ

ವರ್ಗೀಕರಿಸಿದ ಶ್ರೇಯಸ್ಸು ಎಡ್‌ವರ್ಡ ರಿಚಾರ್ಡ್ ಹೆನ್ರಿ (Sir Edward Richard Henry) ಗೆ ಸಲ್ಲುವದು.

## ಬೆರಳಚ್ಚಿನ ಮೂಲತತ್ವಗಳು

**ಮೊದಲನೆಯ ತತ್ವ :** "ಬೆರಳಚ್ಚುಗಳು ಏಕಮೇವ ವೈಯಕ್ತಿಕ ಪರಿಚಯದ ವೈಶಿಷ್ಟ್ಯವಾಗಿರುವದಲ್ಲದೆ, ಯಾವ ಎರಡು ಬೆರಳಚ್ಚುಗಳು ಒಂದೇ ರೀತಿಯ ಏರಿಳಿತಗಳಿದ್ದ ಗೆರೆಗಳ ನಮೂನೆಗಳು ಕಂಡು ಬಂದಿಲ್ಲ." ಬೆರಳಚ್ಚಿನ ವೈಶಿಷ್ಟ್ಯವು ಅವುಗಳ ಆಕಾರ, ನಮೂನೆಗಳಲ್ಲಿರದೇ ಅವುಗಳಲ್ಲಿರುವ ಗೆರೆಗಳ ಉಬ್ಬು ತಗ್ಗುಗಳ ಆಳವಾದ ಅಭ್ಯಾಸದಿಂದ ಕಂಡುಬರುವ ವ್ಯತ್ಯಾಸಗಳಲ್ಲಿ ಇರುತ್ತದೆ. ಅವಳಿ ಜವಳಿ ಮಕ್ಕಳು ನೋಡಲು ಒಂದೇಯಾಗಿದ್ದರೂ ಅವರ ಬೆರಳಚ್ಚುಗಳು ಬೇರೆ ಬೇರೆಯಾಗಿರುತ್ತವೆ. ಕೆಲವು ವಿಜ್ಞಾನಿಗಳ ಪ್ರಕಾರ ೬೪,000,000,000 ಜನಕ್ಕೆ ಒಬ್ಬನ ಕೈಬೆರಳಚ್ಚು ಇನ್ನೊಬ್ಬನ ಕೈಬೆರಳಚ್ಚಿಗೆ ಸರಿ ಹೊಂದಬಹುದೆಂದು ಊಹಿಸಿದ್ದಾರೆ. ಆದರೆ ಇದು ವರೆಗೂ ಈ ಜಗತ್ತಿನಲ್ಲಿ ಯಾರ ಕೈಬೆರಳಚ್ಚುಗಳು ಇನ್ನೊಬ್ಬರಂತಿಲ್ಲ.

**ಎರಡನೆಯ ತತ್ವ :** "ಬೆರಳಚ್ಚುಗಳು ಯಾವ ಬದಲಾವಣೆಯನ್ನೂ ಹೊಂದದೇ, ಅದೇ ರೀತಿ ಆಜನ್ಮ ಉಳಿಯುತ್ತವೆ. ಒಂದು ಸಲ ಮಾನವನ ಗರ್ಭದಲ್ಲಿ ಉಂಟಾದ ಬೆರಳಚ್ಚುಗಳು ಬದಲಾಗದೇ, ಅವು ಇದ್ದಕ್ಕಿದ್ದಂತೆ ಆಕಾರದಲ್ಲಿ ಮಾತ್ರ ಬೆಳೆಯುತ್ತ ಹೋಗುತ್ತವೆ. ಬೆರಳಚ್ಚುಗಳು ವಂಶಪರಂಪರೆಯಾಗಿ ಬಂದಿರುವದಿಲ್ಲ. ಒಮ್ಮೆ ಉಂಟಾದ ಬೆರಚಳ್ಚುಗಳನ್ನು

ಬದಲು ಮಾಡುವ ಇಲ್ಲವೆ ಕೆಡಿಸುವ ಶಕ್ತಿ ಕೇವಲ ಶಸ್ತ್ರಕ್ರಿಯೆ ಅಥವಾ ಉಗ್ರವಾದ ಚರ್ಮರೋಗಕ್ಕೆ ಸಾಧ್ಯವಿದೆ.

**ಮೂರನೆಯ ತತ್ವ:** "ಬೆರಳಚ್ಚುಗಳಲ್ಲಿರುವ ಗೆರೆಗಳ ಸಾಮಾನ್ಯ ಏರಿಳಿತಗಳು ಅಥವಾ ಉಬ್ಬುತಗ್ಗುಗಳು ಸುವ್ಯವಸ್ಥಿತ ವರ್ಗೀಕರಣಕ್ಕೆ ಆಸ್ಪದ ಮಾಡಿಕೊಡುತ್ತವೆ."

ಎಲ್ಲ ಬೆರಳಚ್ಚುಗಳನ್ನು ನಾಲ್ಕು ವರ್ಗಗಳಲ್ಲಿ ವಿಭಜಿಸಲಾಗುವದು. ವಿಭಜಿಸಲು ಅವುಗಳ ಆಕಾರಗಳು ಸಹಾಯ ಮಾಡುತ್ತವೆ. ಇವುಗಳಿಗೆ ಸುರುಳಿ, ಶಂಖ, ಕಮಾನು ಹಾಗೂ ಮಿಶ್ರಿತ ಎಂದು ವರ್ಗಮಾಡಿ ಕರೆಯುವರು.

ಅನೇಕ ವಿಜ್ಞಾನಿಗಳು ಬೆರಳಚ್ಚುಗಳನ್ನು ವರ್ಗೀಕರಿಸಿದ್ದಾರೆ. ಹೆನ್ರಿ (Henry) ಪದ್ಧತಿಯ ಪ್ರಕಾರ ೧) ಪ್ರಾಥಮಿಕ ೨) ಪ್ರಧಾನ ವಿಭಾಗದ ವರ್ಗೀಕರಣ ೩) ಮಾಧ್ಯಮಿಕ ವಿಭಾಗದ ವರ್ಗೀಕರಣ ೪) ಉಪ ಮಾಧ್ಯಮಿಕ ೫) ಮಾಧ್ಯಮಿಕ ಮತ್ತು ಉಪ ಮಾಧ್ಯಮಿಕ ೬) ಕೊನೆಯ ವಿಭಾಗದ ವರ್ಗೀಕರಣ ಎಂದು ನಾಮಕರಣ ಮಾಡಿದ್ದಾರೆ.

ಅಪರಾಧ ನಡೆದ ಸ್ಥಳದಲ್ಲಿ ದೊರೆಯುವ ಬೆರಳಚ್ಚುಗಳು ಮೂರು ಪ್ರಕಾರವಾಗಿರಬಹುದು. ಕಣ್ಣಿಗೆ ಕಾಣಿಸದಂತಹವು, ಮಣ್ಣಿನಲ್ಲಿ ಮೂಡಿದಂತವುಗಳು, ಇಲ್ಲವೆ ಕಣ್ಣಿಗೆ ಕಾಣಿಸದಂತವುಗಳಾಗಿರಬಹುದು. ಈ ಬೆರಳಚ್ಚುಗಳನ್ನು ಅವುಗಳ ಪ್ರತ್ಯಕ್ಷ ನೆಲದ ರೀತಿಯ ಪ್ರಕಾರ ಬೇರೆ ಬೇರೆ ವಿಧಾನಗಳಿಂದ ಅವುಗಳನ್ನು ಗುರುತಿಸಿ, ಕಣ್ಣಿಗೆ ಸ್ಪಷ್ಟವಾಗಿ ಕಾಣುವಂತೆ ಮಾಡಬಹುದು. ಅನಂತರ ಅವುಗಳನ್ನು ಕಾದಿಟ್ಟುಕೊಳ್ಳಬಹುದು.

ಪೇಪರು, ಗ್ಲಾಸು, ಇಲ್ಲವೆ ನಯುವಾದ ಮೇಲ್ಮೈಯಿರುವ ವಸ್ತುಗಳ ಮೇಲಿನ ಬೆರಳಚ್ಚುಗಳನ್ನು ಪಾವಡರಗಳಿಂದ ಕಾಣುವಂತೆ ಮಾಡಬಹುದು. ಗೋಡೆಯ ಮೇಲಿದ್ದ ಬೆರಳಚ್ಚುಗಳನ್ನು ಐಯೊಡಿನ್ ಹೊಗೆಯಿಂದ ಗುರುತಿಸಬಹುದು. ಒಂದು ಸಲ ಈ ರೀತಿ ಕಣ್ಣಿಗೆ ಕಾಣುವಂತೆ ಮಾಡಿದ ನಂತರ ಅವುಗಳನ್ನು ತುಲನಾತ್ಮಕವಾಗಿ ಪರೀಕ್ಷಿಸಲು ಹಾಗೂ ನ್ಯಾಯಾಲಯದಲ್ಲಿ ತೋರಿಸಲು ಕಾಯ್ದಿರಿಸಿಕೊಳ್ಳಬೇಕಾಗುತ್ತದೆ.

ಅಪರಾಧ ನಡೆದ ಸ್ಥಳದಲ್ಲಿ ದೊರೆತ ಬೆರಳಚ್ಚುಗಳು ಇಂತಹ ವ್ಯಕ್ತಿಯುದೇ ಎಂದು ಕಂಡು ಹಿಡಿಯಬಹುದು. ಅವನು ಆ ಸ್ಥಳದಲ್ಲಿದ್ದನೆಂಬುದನ್ನು ತೋರಿಸಿಕೊಡುತ್ತದೆ. ಆ ಬೆರಳಚ್ಚು ಇದ್ದಾಕ್ಷಣ ಅವನು ಅಪರಾಧ ಮಾಡಿದ್ದಾನೆ ಎಂದು ಹೇಳಲು ಬರುವದಿಲ್ಲ. ಅವನು ಅಲ್ಲಿಗೇಕೆ ಬಂದನೆಂಬುದನ್ನು ತಿಳಿಯಬೇಕಾಗುತ್ತದೆ. ಒಂದು ವೇಳೆ ಅಪರಾಧಿಯ ಬೆರಳಚ್ಚುಗಳು ಪಿಸ್ತೂಲು ಇಲ್ಲವೆ ಚೂರಿಯ ಮೇಲಿದ್ದರೆ ಅವನು ಆ ಆಯುಧವನ್ನು ಮುಟ್ಟಿದ್ದನು ಎಂದು ಹೇಳಬಹುದು. ಹೀಗೆ ನಾನಾ ಪ್ರಕಾರದ ರೀತಿಯಲ್ಲಿ ಪರೀಕ್ಷಿಸಿ ಅಪರಾಧಿಯ ಸಂಬಂಧವನ್ನು ಅಪರಾಧಕ್ಕೆ ಹಚ್ಚಬಹುದು.

ಚರ್ಮರಂಧ್ರಗಳ ಶಾಸ್ತ್ರದ ಪ್ರಕಾರ ಪೂರ್ಣ ಬೆರಳಚ್ಚುಗಳು ಸಿಗದಿದ್ದರೂ, ಅದರ ಸ್ವಲ್ಪ ಭಾಗದ ಸಹಾಯದಿಂದಲೂ ಆಯಾ ವ್ಯಕ್ತಿಗಳನ್ನು ಗುರುತಿಸಲು ಸಾಧ್ಯ. ಚರ್ಮರಂಧ್ರಗಳೆಂದರೆ ಎಲ್ಲರ ಮೈಮೇಲೆ ಬೆವರು ಸುರಿಸುವ ಅತಿ ಚಿಕ್ಕ

ಗಾತ್ರದ ತೂತುಗಳು. ಇವುಗಳ ಆಕಾರ, ರೀತಿ, ಬೇರೆ ಬೇರೆ ಮನುಷ್ಯರಲ್ಲಿ ಬೇರೆ ಬೇರೆ ರೀತಿಯಲ್ಲಿರುತ್ತವೆ. ಆದ್ದರಿಂದ ಅಪರಾಧಿಗಳ ಬೆರಳಚ್ಚುಗಳ ಸ್ವಲ್ಪ ಭಾಗವಾದರೂ ಸಿಕ್ಕರೆ ಸಾಕು ಅವರನ್ನು ಹುಡುಕಲು ಉಪಯೋಗವಾಗುತ್ತದೆ.

ಡಾ. ಎಡ್ಮಂಡ ಲೊಕಾರ್ಡ (Dr. Edmond Locard) ಇವರು ವೈದ್ಯಕೀಯ ಹಾಗೂ ಕಾನೂನಿನ ಶಿಕ್ಷಣ ಪಡೆದಿದ್ದರು. ಪೋಲಿಸರೊಂದಿಗೆ ತಾಂತ್ರಿಕ ತಜ್ಞರಾಗಿ ಕೆಲಸ ಮಾಡಿ, ಶಾಸ್ತ್ರೀಯ ಅಪರಾಧ ಶೋಧನೆಯಲ್ಲಿ ಪ್ರಾರಂಭದ ಹಂತದ ಕೆಲಸ ಮಾಡಿದರು. ವಸ್ತುಗಳನ್ನು ಹಾಗೂ ಸೂಕ್ಷ್ಮಕಣಗಳನ್ನು ಪರೀಕ್ಷಿಸಿ, ವಿಂಗಡಿಸಿ, ವಿಭಜಿಸಿ, ಅವುಗಳ ಗುಟ್ಟನ್ನು ತಿಳಿದುಕೊಳ್ಳುವ ಕಲೆಯನ್ನು ಇವರು ಕಂಡುಕೊಂಡರು. ತನ್ನದೇ ಆದ ವಿನಿಮಯದ ತತ್ವವನ್ನು ಕಂಡುಹಿಡಿದರು. ಇದಕ್ಕೆ 'ಲೊಕಾರ್ಡ್ಸ್ ಪ್ರಿನ್ಸಿಪಲ್ ಆಫ್ ಎಕ್ಸಚೆಂಜ' (Locard's principle of Exchange) ಎನ್ನುವರು. ಎರಡು ವಸ್ತುಗಳು ಒಂದನ್ನೊಂದು ಮುಟ್ಟಿದಾಗ, ಅವುಗಳಲ್ಲಿಯ ಕಲೆಗಳು ವಿನಿಮಯವಾಗುತ್ತವೆ. ಈ ತರಹದ ವರ್ಗಾಯಿಸಿದ ಕುರುಹುಗಳ ಆಧಾರದ ಮೇಲೆ ಅಪರಾಧಿಗಳ ಸಂಪರ್ಕವನ್ನು ಅಪರಾಧ ನಡೆದ ಸ್ಥಳಕ್ಕೆ ಜೋಡಿಸಬಹುದು ಎಂದು ಉದಾಹರಣೆಗಳಿಂದ ತೋರಿಸಿ ಕೊಟ್ಟನು.

ನಾವು ಒಂದು ಕಾಗದವನ್ನು ಮುಟ್ಟಿದರೆ, ಅಲ್ಲಿ ನಮ್ಮ ಕೈ ಗುರುತುಗಳನ್ನು ಬಿಡುತ್ತೇವೆ. ಹಾಗೂ ಅದರ ಮೇಲಿನ ಧೂಳನ್ನು ಕೈಗೆ ಅಂಟಿಸಿಕೊಳ್ಳುತ್ತೇವೆ. ಈ ರೀತಿ ವಿನಿಮ

ಯುದ ಮುಖಾಂತರ ನಾವು ನಮ್ಮ ಹಾಜರಾತಿಯನ್ನು ಸಿದ್ಧ ಮಾಡಿ ತೋರಿಸಬಹುದು. ಆಧುನಿಕ ವೈಜ್ಞಾನಿಕ ಸಲಕರಣೆಗಳು ಈ ರೀತಿ ಬಿಟ್ಟು ಹೋದ ಇಲ್ಲವೆ ಅಪರಾಧಿಯು ತೆಗೆದು ಕೊಂಡು ಹೋದ ವಸ್ತುಗಳನ್ನು ಪತ್ತೆ ಹಚ್ಚಬಹುದು. ಈ ಕುರುಹುಗಳನ್ನು ಪತ್ತೆ ಮಾಡುವಾಗ ಬಹಳ ಎಚ್ಚರಿಕೆಯಿಂದ ಶೋಧನೆ ನಡೆಸಬೇಕು ಅಪರಾಧಿಗೂ ಹಾಗೂ ಕೃತ್ಯನಡೆದ ಸ್ಥಳಕ್ಕೂ ಸಂಬಂಧ ಜೋಡಿಸುವದು ಬಹಳ ಮುಖ್ಯವಾದ ಕೆಲಸವಾಗಿದೆ.

ಲೊಕಾರ್ಡನು ಫ್ರಾನ್ಸದಲ್ಲಿ ೧೯೧೦ ರಲ್ಲಿ ಪ್ರಥಮ ಅಪರಾಧ ಶೋಧ ಪ್ರಯೋಗಾಲಯುವನ್ನು ಸ್ಥಾಪಿಸಿದನು. ಈ ಪ್ರಯೋಗಾಲಯುದಿಂದ ಪೋಲಿಸರು ಅಪರಾಧಿಗಳನ್ನು ಪತ್ತೆ ಹಚ್ಚುವದರಲ್ಲಿ ಬಹಳ ಸಹಾಯ ಮಾಡಹತ್ತಿದರು.

ಅಗ್ನ್ಯಾಸ್ತ್ರವು ಮೊದಲು ಅಮೇರಿಕೆಯಲ್ಲಿ ಅಪರಾಧ ಶೋಧನೆಯ ಕಾರ್ಯದಲ್ಲಿ ಉಪಯೋಗಿಸಲ್ಪಟ್ಟಿತೆಂದು ಹೇಳ ಬಹುದು. ಗುಂಡುಗಳನ್ನು ಅಭ್ಯಸಿಸುವ ಈ ಶಾಸ್ತ್ರವು ಅಗ್ನ್ಯಾಸ್ತ್ರಗಳಿಂದ ಉಂಟಾಗುವ ಅಪರಾಧಗಳನ್ನು ಪತ್ತೆ ಮಾಡಲು ಕರ್ನಲ್ ಕಾಲ್ವಿನ್ ಗೊಡ್ಡಾರ್ಡ (Colonel calvin Goddard) ಎಂಬವರು ಸುರುವು ಮಾಡಿದ ರೆಂದು ಹೇಳಬಹುದು. ಇವನು ವೈದ್ಯಶಾಸ್ತ್ರದ ಪ್ರವೀಣನಾಗಿದ್ದನು. ಅಪರಾಧ ಸ್ಥಳದಲ್ಲಿ ಸಿಕ್ಕ ಗುಂಡುಗಳು ಇಲ್ಲವೆ ಮದ್ದಿನ ತೋಟೆಗಳು ಯಾವ ಅಗ್ನ್ಯಾಸ್ತ್ರದಿಂದ ಹಾರಿಸಲ್ಪಟ್ಟವು, ಅವುಗಳಿಂದಾದ ಗಾಯುಗಳ ಪರಿಶೀಲನೆಯಿಂದ ಅವು ಎಷ್ಟು

ದೂರದಿಂದ ಹಾರಿಸಲ್ಪಟ್ಟವು ಇತ್ಯಾದಿಗಳನ್ನು ಕಂಡು ಹಿಡಿಯ ಬಹುದು ಎಂದು ಈತನು ತೋರಿಸಿಕೊಟ್ಟನು.

ಅಗ್ನ್ಯಾಸ್ತ್ರಗಳ ಅಪರಾಧಗಳಲ್ಲಿ ತನಿಖಾಧಿಕಾರಿಯು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ದೊರಕಿಸಲು ಅಲ್ಲಿ ಸಿಕ್ಕ ವಸ್ತು ಗಳನ್ನು ಅಗ್ನ್ಯಾಸ್ತ್ರಗಳ ತಜ್ಞರಿಗೆ ಕಳಿಸುತ್ತಾನೆ.

೧) ಗುಂಡು ಅಥವಾ ತೋಟೆ ಯಾವ ಅಗ್ನ್ಯಾಸ್ತ್ರಗಳಿಂದ ಹಾರಿಸಲ್ಪಟ್ಟಿದೆ ?

೨) ಶಂಕಿಸಿದ ಅಗ್ನ್ಯಾಸ್ತ್ರವು ಆ ಗುಂಡು ಅಥವಾ ತೋಟೆ ಯನ್ನು ಹಾರಿಸಿದೆಯೆ ?

೩) ಎಷ್ಟು ಅಂತರದಿಂದ ಅಗ್ನ್ಯಾಸ್ತ್ರವನ್ನು ಹಾರಿಸಿದೆ ?

೪) ಯಾವ ಕೋನದಿಂದ ಗುಂಡು ಬಡಿದಿದೆ?

೫) ಎಷ್ಟು ಸಮಯದ ಹಿಂದೆ ಆ ಅಗ್ನ್ಯಾಸ್ತ್ರವನ್ನು ಹಾರಿಸಿರಬಹುದು.

೬) ಶಂಕಿಸಿದ ವ್ಯಕ್ತಿ ಅಗ್ನ್ಯಾಸ್ತ್ರವನ್ನು ಹಾರಿಸಿರಬಹುದೆ?

೭) ಆ ಅಗ್ನ್ಯಾಸ್ತ್ರವು ಆಕಸ್ಮಿಕವಾಗಿ ಹಾರಿರಬಹುದೆ ?

ಈ ಮೇಲಿನ ಪ್ರಶ್ನೆಗಳನ್ನು ತಜ್ಞರು ಗುಂಡುಗಳ ಅಥವಾ ತೋಟೆಗಳ ಮೇಲಿನ ಗೀರುಗಳನ್ನು, ಮಾರ್ಕುಗಳನ್ನು ತುಲನಾತ್ಮಕ ಸೂಕ್ಷ್ಮದರ್ಶಕ ಯಂತ್ರದಿಂದ, ಅವುಗಳಿಂದ ಆದ ಗಾಯಗಳ ಪರೀಕ್ಷೆಗಳಿಂದ, ಅಗ್ನ್ಯಾಸ್ತ್ರಗಳ ಪರಿಕ್ಷೆಯಿಂದ, ಶಂಕಿ ಸಿದ ವ್ಯಕ್ತಿಯ ಕೈ ಇಲ್ಲವೆ ಬಟ್ಟೆಗಳ ಪರೀಕ್ಷೆಯಿಂದ, ಉತ್ತರಿಸ ಬಹುದು.

ಒಂದೇ ಬಂದೂಕಿನಿಂದ ಹಾರಿಸಿದ ತೋಟೆಗಳು (ಎರಡು) ಒಂದನ್ನೊಂದು ಹೋಲುತ್ತವೆ. ಬೇರೆ ಬೇರೆ ಬಂದೂಕಿನಿಂದ ಹಾರಿಸಿದ ತೋಟೆಗಳು ಬೇರೆ ಬೇರೆಯಾಗಿರುತ್ತವೆ. ಯಾಕೆಂದರೆ ಆ ಎರಡೂ ಬಂದೂಕುಗಳ ಹಾರಿಸುವ ಕುದುರೆಗಳು ತಮ್ಮದೇ ಆದ ವಿಶಿಷ್ಟ ಮಾರ್ಕುಗಳನ್ನು ಮದ್ದಿನ ತೋಟೆಗಳ ಮೇಲೆ ಬಿಟ್ಟಿರುತ್ತವೆ. ಈ ಮಾರ್ಕುಗಳಿಂದ ಹಾರಿಸಿದ ಬಂದೂಕನ್ನು ಗುರುತಿಸಬಹುದು.

ಎರಡು ರೈಫಲ್‌ಗಳೂ ಕೂಡ ಅವು ಹಾರಿಸಿದ ಗುಂಡುಗಳ ಮೇಲೆ ತಮ್ಮದೇ ಆದ ವಿಶಿಷ್ಟ ಗೀರುಗಳನ್ನು ಬಿಟ್ಟಿರುತ್ತವೆ. ಆ ಎರಡೂ ರೈಫಲ್‌ಗಳೂ ಒಂದೇ ಖಾರಖಾನೆಯಲ್ಲಿಯೇ ತಯಾರಾಗಿರಬಹುದು; ಅವುಗಳಿಂದ ಹಾರಿಸಿದ ಗುಂಡುಗಳು ಬೇರೆ ಬೇರೆ ರೀತಿ ಗೀರುಗಳನ್ನು ಹೊಂದಿರುತ್ತವೆ ಅಥವಾ ಮೂಡಿಸಿಕೊಂಡಿರುತ್ತವೆ. ಯಾಕೆಂದರೆ ಆ ರೈಫಲ್‌ಗಳ ಬ್ಯಾರಲ್ಲಗಳನ್ನು ಒಂದೇ ಪೈಪಿನಿಂದಲೂ ತೆಗೆದುಕೊಂಡಿರಬಹುದು. ಆ ಬ್ಯಾರಲ್‌ಗಳಲ್ಲಿ ಗುಂಡುಗಳು ತಿರುಗುತ್ತ, ತಮ್ಮ ವೇಗವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಬೋರ (Bore)ಮಾಡಿರುತ್ತಾರೆ. ಅಂದರೆ ಲಾಂಡ್ಸ ಮತ್ತು ಗ್ರೂವ (Lands & grooves) ಗಳು ಅಲ್ಲಿರುತ್ತವೆ. ಬೋರ ಮಾಡುವಾಗ, ಬೋರ ಮಶಿನ್, ಬೋರ ಮಾಡುತ್ತ ಮುಂದೆ ಸಾಗುವಾಗ ಅದರ ಮುಂದೆ ಸಣ್ಣ ಸಣ್ಣ ಕಬ್ಬಿಣದ ಚೂರುಗಳು ಆಟಕಾಯಿಸಿ ಪ್ರತಿ ಹೆಜ್ಜೆಗೂ ತಮ್ಮದೆ ವಿಶಿಷ್ಟ ಗೀರುಗಳನ್ನು ಮೂಡಿಸು

ತ್ತವೆ. ಈ ವಿಶಿಷ್ಟ ಗೀರುಗಳೇ ಆ ಗುಂಡಿನ ಮೇಲೆ ಮೂಡಿರುತ್ತವೆ. ಯಾಕೆಂದರೆ ಗುಂಡನ್ನು ಸೀಸಿನಿಂದ ಮಾಡಿರುತ್ತಾರೆ. ಅದು ಕಾಯ್ದು ಮೆತ್ತಗಾಗಿ ಬ್ಯಾರಲ್‌ನಲ್ಲಿ ಸಾಗುತ್ತಿದ್ದಾಗ ಗೀರುಗಳು ಮೂಡುತ್ತವೆ. ಆದ್ದರಿಂದ ಪ್ರತಿ ರೈಫಲ್ಲು ತನ್ನದೇ ಆದ ಗೀರುಗಳುಳ್ಳ ಗುಂಡುಗಳನ್ನು ಹಾರಿಸುತ್ತದೆ. ಹೀಗಾಗಿ ಗುಂಡುಗಳ ಗೆರೆಗಳ ಪರೀಕ್ಷೆಯಿಂದ ಅವುಗಳನ್ನು ಹಾರಿಸಿದ ಅಗ್ನ್ಯಸ್ತ್ರಗಳನ್ನು ಸುಲಭವಾಗಿ ಗುರುತಿಸಬಹುದು.

ಅಗ್ನ್ಯಸ್ತ್ರದಿಂದ ಉಂಟಾದ ಗಾಯಗಳ ಪರೀಕ್ಷೆಗಳಿಂದ ಅದು ಯಾವ ದಿಕ್ಕಿನಿಂದ ಬಂದು ಬಡಿಯಿತು, ಎಷ್ಟು ಅಂತರದಿಂದ ಬಡಿಯಿತು ಎಂಬುದನ್ನು ತಿಳಿಸಬಹುದು. ಯಾವದೇ ವ್ಯಕ್ತಿಯು ಅಗ್ನ್ಯಸ್ತ್ರವನ್ನು ಹಾರಿಸಿದ್ದರೆ ಅವನ ಕೈ ಇಲ್ಲವೆ ಬಟ್ಟೆಗಳ ಮೇಲಿದ್ದ ಸೂಕ್ಷ್ಮ ಮದ್ದಿನ ಕಣಗಳಿಂದ, ಅವನು ಅಗ್ನ್ಯಸ್ತ್ರವನ್ನು ಹಾರಿಸಿರುವನೋ ಅಥವಾ ಇಲ್ಲವೋ ಎಂಬುದು ಗೊತ್ತಾಗುವದು. ಆ ಅಗ್ನ್ಯಸ್ತ್ರದ ತಾಂತ್ರಿಕ ಪರೀಕ್ಷೆಯಿಂದ ಅದರಲ್ಲಿದ್ದ ತಾಂತ್ರಿಕ ದೋಷದಿಂದಲೂ ಕೆಲವೊಂದು ಸಲ ಅಕಸ್ಮಾತ್ ಗುಂಡು ಹಾರಿಸಿರಬಹುದೆಂದು ಕಂಡು ಬರುವದು.

ಶಾಸ್ತ್ರೀಯವಾಗಿ ಕಾನೂನುಬದ್ಧ ವೈದ್ಯಕೀಯ ತಂತ್ರವನ್ನು ಅಪರಾಧ ಶೋಧಕ್ಕೆ ಬಳಸಿದವನು ಸರ್ ಬರ್ನಾಡ, ಜಾನ ಸ್ಪಿಲ್ಸಬರಿ (Sir Bernard John Spilsbury) ಎಂದು ಹೇಳಬಹುದು. ಈತನು ಔಷಧ ಶಾಸ್ತ್ರದ ಪಂಡಿತನು. ವೈದ್ಯಕೀಯ ಶಿಕ್ಷಣದಲ್ಲಿ ಔಷಧಗಳನ್ನು ಕುರಿತು ಹೆಚ್ಚಿನ ಮಹತ್ವಕೊಟ್ಟು ಅವುಗಳಲ್ಲಿ ಸೇರುವ ವಸ್ತುಗಳ ಗುಣಧರ್ಮಗಳನ್ನು

ಅಭ್ಯಾಸ ಮಾಡಿದನು. ಈ ಕ್ಷೇತ್ರದಲ್ಲಿ ಕಣ್ಣಿಗೆ ಕಾಣುವ ಪುರಾವೆಗಳನ್ನು ಅಪರಾಧ ಶೋಧಕ್ಕಾಗಿ ಕಂಡು ಹಿಡಿಯುವದರಲ್ಲಿ ಇವನು ಮೊದಲಿಗನೆಂದು ಹೇಳಬಹುದು. ಕಾನೂನಿನ ಮಹತ್ವವನ್ನು ಅರಿತು ಆದರ ಚೌಕಟ್ಟಿನಲ್ಲಿ ತಾನು ಕಂಡು ಹಿಡಿದ ವಾಸ್ತವ ಪುರಾವೆಗಳನ್ನು ಪ್ರದರ್ಶಿಸಿ ತೋರಿಸಿ ಅಪರಾಧಿಗಳನ್ನು ಶಿಕ್ಷಿಸಲು ನ್ಯಾಯಾಲಯಕ್ಕೆ ನೆರವಾದನು.

ಪ್ರತ್ಯಕ್ಷನಿದರ್ಶನ: ಇದು ಕೇವಲ ಕೆಲವು ದೇಹದ ತುಂಡಗಳ ಸಹಾಯದಿಂದ ಅಪರಾಧಿಯನ್ನು ಪತ್ತೆ ಮಾಡಿದ ಉದಾಹರಣೆ. ಲಂಡನ್‌ದಲ್ಲಿ ಒಂದು ನೆಲಮನೆ ಅಗೆಯುತ್ತಿದ್ದಾಗ ಕೆಲವು ದೇಹದ ತುಂಡುಗಳು ಸಿಕ್ಕವು. ಆ ತುಂಡುಗಳು ೫ರಿಂದ ೨ ಇಂಚಿನಷ್ಟು ಉದ್ದವಾಗಿದ್ದು, ಅವು ಮಾನವ ದೇಹದ ತುಂಡುಗಳಿರಬಹುದೆಂದು ಡಾ. ಸ್ಪಿಲ್ಸಬರಿಯವರಿಗೆ ಪರೀಕ್ಷಿಸಲು ಪೋಲಿಸರು ಕಳುಹಿಸಿದರು. "ಈ ತುಂಡುಗಳು ಮಹಿಳೆಯ ದೇಹದ ತುಂಡುಗಳು, ಆ ಮಹಿಳೆ ಗರ್ಭಜವಾಯು ಚೇಷ್ಟೆ ರೋಗದಿಂದ ಬಳಲುತ್ತಿದ್ದಳೆಂದೂ, ಸಾಯುವದಕ್ಕೆ ಮುಂಚೆ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡಿದ್ದಳೆಂದೂ" ತಿಳಿಸಿದರು. ಡಾಕ್ಟರರ ಹೇಳಿಕೆಯ ಪ್ರಕಾರ ಪೋಲೀಸರು ಆ ಊರಿನಲ್ಲಿಯ ಈ ತರಹದ ರೋಗದಿಂದ ಬಳಲುತ್ತಿದ್ದ ರೋಗಿಗಳ ಯಾದಿಯನ್ನೇ ತಯಾರಿಸಿದರು. ಈ ಯಾದಿಯಲ್ಲಿ ಕೋರಾ ಕ್ರಿಪನ್‌ಳ ಹೆಸರೂ ಸೇರಿತ್ತು. ವಿಚಿತ್ರವೆಂದರೆ ಅವಳ ಹೆಸರು ಕಾಣೆಯಾದವರ ಯಾದಿಯಲ್ಲಿಯೂ ಇತ್ತು. ಅವಳ ಶಸ್ತ್ರ ಚಿಕಿತ್ಸೆಯ ನಂತರವೂ ರೋಗದಿಂದ ಪಾರಾಗದ್ದಕ್ಕೆ ಅವಳು ಆತ್ಮಹತ್ಯೆ

ಮಾಡಿಕೊಂಡಿರಬಹುದಾದ ಸಂಶಯವನ್ನು ಅವಳ ಗಂಡ ಬಹಳ ದಿನಗಳ ಹಿಂದೆ ಹೇಳಿಕೆ ನೀಡಿದ್ದ. ಡಾ. ಸ್ಪಿಲ್ಸಬರಿಯವರು ಆ ದೇಹದ ತುಂಡುಗಳು ಕೋರಾ ಕ್ರೈಪನ್‌ಳದೇ ಎಂದು ಆ ಚರ್ಮದ ತುಂಡುಗಳನ್ನು ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಅವುಗಳ ಸ್ಲೈಡ್ ತಯಾರಿಸಿ ಶಸ್ತ್ರ ಕ್ರಿಯೆಯ ಮಾದ ಗಾಯದ ಕಲೆಗಳನ್ನು ಜೋಡಿಸಿ ಮತ್ತು ಬೇರೆ ಯಾವ ಉಪಾಯ ದಿಂದಲೂ ಆ ಚರ್ಮ ದೊರೆಯುವದು ಸಾಧ್ಯವಿಲ್ಲವೆಂದು ಸಿದ್ಧ ಮಾಡಿ ತೋರಿಸಿದರು. ಇದರಿಂದ ಅವಳು ಆತ್ಮಹತ್ಯೆಗಾಗಿ ಕಾಣೆಯಾಗಿಲ್ಲ, ಆದರೆ ಅವಳನ್ನು ಕೊಲೆ ಮಾಡಿದ್ದಾರೆಂದು ಸಿದ್ಧ ವಾಯಿತು. ಕೊನೆಗೆ ಪೋಲೀಸರು ಕೇಸನ್ನು ಕೂಲಂಕಷವಾಗಿ ವಿಚಾರಣೆ ನಡೆಸಿ, ಕೋರಾ ಕ್ರೈಪನ್‌ಳಿಗೆ ಶತ್ರುಗಳು ಯಾರೂ ಇರಲಿಲ್ಲವೆಂದೂ, ಸ್ವಭಾವ, ನಡತೆಗಳಿಂದ ಒಳ್ಳೇ ವ್ಯಕ್ತಿಯಾಗಿದ್ದ ಳೆಂದೂ ಕಂಡು ಹಿಡಿದರು. ಜನ್ಮವಿಡೀ ನರಳಬೇಕಾದ ತನ್ನ ಪತ್ನಿಯ ಆರೈಕೆ-ಶೋಷಣೆ-ಉಪಚಾರ ಮಾಡಬೇಕಾಗುವದೆಂದು ದುಷ್ಟಬುದ್ಧಿಯಿಂದ ಅವಳ ಗಂಡನೇ ಕೊಲೆ ಮಾಡಿದ್ದಾನೆಂದು ಶಂಕಿಶಿ ವಿಚಾರಿಸಿದರು. ಪೋಲೀಸರ ಶಂಕೆ ನಿಜವಾಗಿ ನ್ಯಾಯಾ ಲಯದಲ್ಲಿ ಆತ ವಿಜ್ಞಾನಕ್ಕೆ ತಲೆಬಾಗಿ ತನ್ನ ತಪ್ಪನ್ನು ಒಪ್ಪಿ ಕೊಂಡನು.

ಉಳಿದ ವಿಜ್ಞಾನಿಗಳನ್ನೂ ಹಾಗೂ ಕಾನೂನು ತಜ್ಞರನ್ನೂ ಒಟ್ಟುಗೂಡಿಸಿ ಅಪರಾಧಿಗಳನ್ನು ಕಂಡುಹಿಡಿಯಲು ಪ್ರಯತ್ನಿ ಸಿದವನು ಆಸ್‌ಬೋರ್ನ (Albert S. Osborn). ತಾನು ಕಂಡು ಹಿಡಿದ ವೈಜ್ಞಾನಿಕ ಪುರಾವೆಗಳನ್ನು ನ್ಯಾಯಾಲಯದ

ಎದುರು ಪ್ರಯೋಗ ಮಾಡಿ ತೋರಿಸಿ ಅವುಗಳಲ್ಲಿರುವ ಶಾಸ್ತ್ರೀಯ ಸಿದ್ಧಾಂತಗಳನ್ನು ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಮನಗಾಣಿಸಿದನು. ಜಗತ್ತಿನಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ವಿಶಿಷ್ಟ ವ್ಯಕ್ತಿತ್ವ ಇದ್ದೇ ಇರುತ್ತದೆ. ಉದಾ : ಪ್ರತಿಯೊಬ್ಬನ ಹಸ್ತಾಕ್ಷರ, ಬರವಣಿಗೆ ಮತ್ತೊಬ್ಬನಕ್ಕಿಂತ ಭಿನ್ನ ವಾಗಿರುತ್ತದೆ.

ಹಸ್ತಾಕ್ಷರ ತಜ್ಞರು ತನಿಖಾಧಿಕಾರಿಗಳಿಗೆ ಕೆಳ ಕಾಣಿಸಿದ ಪ್ರಮುಖ ಮಾಹಿತಿಗಳನ್ನು ಕೊಡಬಲ್ಲರು.

೧) ಕಾಗದ ಪತ್ರಗಳಲ್ಲಿ ಬರವಣಿಗೆ ಸಂಶಯಿತ ವ್ಯಕ್ತಿ ಯದೋ ಅಥವಾ ಅಲ್ಲವೋ ? ೨) ಕಾಗದ ಪತ್ರಗಳನ್ನು ತಿದ್ದಿದ್ದಾರೋ ಹೇಗೋ ? ೩) ಕಾಗದ ಪತ್ರದ ಕಾಲದ ಮಿತಿ ಯನ್ನು ಹೇಳಬಹುದು. ೪) ಕಾಗದ ಪತ್ರಕ್ಕೆ ಉಪಯೋಗಿ ಸಿದ ಶಾಯಿಯ ಗುಣಧರ್ಮ ಹಾಗೂ ಅದರ ತಯಾರಿಕೆಯ ಬಗ್ಗೆ ಸಹ ಹೇಳಬಹುದು. ೫) ಸುಟ್ಟ ಕಾಗದಲ್ಲಿಯ ವಿಷಯ ಗಳನ್ನು ಸಹ ತಿಳಿಸಬಲ್ಲರು. ೬) ಬಂದ ಮಾಡಿದ ಲಕೋಟೆ ಯೊಳಗಿನ ಕಾಗದಲ್ಲಿಯ ವಿಷಯವನ್ನೂ ಕೂಡ ಲಕೋಟೆ ಯನ್ನು ಒಡೆಯದೇ ಅದರಲ್ಲಿಯ ವಿಷಯುನ್ನು ತಿಳಿಸಬಲ್ಲರು.

ವ್ಯಕ್ತಿಯ ಕೈ ಬರಹ ಪರೀಕ್ಷಿಸುವಾಗ, ಕಾಗದಲ್ಲಿಯ ಮಾರ್ಜಿನ್, ಎರಡು ಶಬ್ದಗಳ ನಡುವಿನ ಅಂತರ, ಪ್ರತಿ ಶಬ್ದದ ಎತ್ತರ, ಅಗಲ, ವಾಲುವಿಕೆ, ಪ್ರಾರಂಭ ಹಾಗೂ ಅಂತ್ಯ, ಪೆನ್ನಿನ ಒತ್ತಡ, ಶಬ್ದಗಳ ಚಿತ್ರಕಾಟ ಮುಂತಾದವುಗಳನ್ನು ಲಕ್ಷದಲ್ಲಿಡ ಬೇಕಾಗುತ್ತದೆ.

ಈ ರೀತಿ ಕಾಗದ ಪತ್ರಗಳಲ್ಲಿ ಮಾಡಿದ ಅಪರಾಧಗಳನ್ನು ನಾನಾ ವಿಧಾನಗಳಿಂದ ಗುರುತಿಸಿ ಅಪರಾಧಿಗಳನ್ನು ಕಂಡು ಹಿಡಿಯಬಹುದು.

ಖೂನಿ, ಹಲ್ಲೆ, ದರೋಡೆ, ಬಲತ್ಕಾರ ಮುಂತಾದ ಅಪರಾಧಗಳು ಸಂಭವಿಸಿದಾಗ ಅಲ್ಲಿ ರಕ್ತ ಸಿಗುವದು ಸರ್ವ ಸಾಮಾನ್ಯ. ರಕ್ತದ ಸಹಾಯದಿಂದ ಅಪರಾಧಿಗಳನ್ನು ಕಂಡು ಹಿಡಿಯಲು ವೈಜ್ಞಾನಿಕವಾಗಿ ಸಹಾಯ ಮಾಡಿದವನು ಡಾ. ಕಾರ್ಲ ಲ್ಯಾಂಡ ಸ್ಟೀನರ (Dr. Carl Land stainer) ಎಂದು ಹೇಳಬಹುದು. ಇವನು ರೋಗ ಹಾಗೂ ರಕ್ತ ಶಾಸ್ತ್ರಜ್ಞನು. ರಕ್ತಕ್ಕೆ ಸಂಬಂಧಿಸಿದ ಇವನ ಸಂಶೋಧನೆಯು ಮಹತ್ವದ್ದು. ರಕ್ತ ಮಿಶ್ರಣದಿಂದ ಹೆಪ್ಪುಗಟ್ಟುವಿಕೆಯನ್ನು ಕಂಡುಹಿಡಿದನು. ಇದಕ್ಕಾಗಿಯೇ ಇವನಿಗೆ ನೊಬಲ್ ಪಾರಿತೋಷಕ ಸಿಕ್ಕಿದೆ.

ರಕ್ತದ ಸಹಾಯದಿಂದ ಕೆಳಗಿನ ಅಂಶಗಳನ್ನು ನಿರ್ದಿಷ್ಟವಾಗಿ ಗುರುತಿಸಬಹುದು.

೧) ಕೊಲೆಯಾದ ಸ್ಥಳದಲ್ಲಿ ಚಲ್ಲಿದ ರಕ್ತದಿಂದ ಕೊಲೆಯು ಅದೇ ಸ್ಥಳದಲ್ಲಿ ಆಗಿದೆಯೋ ಅಥವಾ ಬೇರೆ ಕಡೆಗೆ ಕೊಲೆ ಮಾಡಿ ಈ ಜಾಗೆಯಲ್ಲಿ ಚಲ್ಲಿರುವರೋ ಹೇಗೋ ಎಂದು ಗುರುತಿಸಬಹುದು.

೨) ಅಲ್ಲಿ ಸಿಕ್ಕ ರಕ್ತ ಮನುಷ್ಯರದೋ ಅಥವಾ ಪ್ರಾಣಿಗಳದೋ ಎಂದು ಹೇಳಬಹುದು.

೩) ಕೊಲೆಯಾದ ವ್ಯಕ್ತಿಯ ಮೈಮೇಲೆ ಸಿಕ್ಕ ರಕ್ತ ಕೊಲೆಯಾದ ವ್ಯಕ್ತಿಯದೋ ಅಥವಾ ಆರೋಪಿಯದೋ ಎಂದು ಗುರುತಿಸಬಹುದು.

೪) ಆರೋಪಿಯ ಬಳಿಯಲ್ಲಿದ್ದ ಆಯುಧಗಳ ಮೇಲೆ ಇದ್ದಂತಹ ರಕ್ತವು ಕೊಲೆಯಾದವನ ರಕ್ತಕ್ಕೆ ಹೊಂದುವದೋ ಹೇಗೆ ಎಂದು ಗುರುತಿಸುವದು.

೫) ರಕ್ತ ಪರೀಕ್ಷೆಯಿಂದ ಆಗಬಹುದಾದ ವಂಶಜರನ್ನು ಗುರುತಿಸಬಹುದು.

ಹಿಂಸಾತ್ಮಕ ಅಪರಾಧಗಳು ನಡೆದಾಗ ಸಾಧಾರಣವಾಗಿ ಈ ಕ್ರಿಯೆಯಲ್ಲಿ ಭಾಗಿಯಾದವರ ಬಟ್ಟೆ, ಆಯುಧಗಳ ಮೇಲೆ ರಕ್ತದ ಕಲೆಗಳು ಇರುತ್ತವೆ. ಅಪರಾಧ ನಡೆದ ಜಾಗದಲ್ಲಿ ಕಂಡುಬಂದ ರಕ್ತದ ಕಲೆಗಳು ಮತ್ತು ಉಳಿದ ಗುರುತುಗಳ ಅಧ್ಯಯನದಿಂದ ಕೃತ್ಯ ಹೇಗೆ ನಡೆದಿರಬಹುದು ಎಂಬ ಚಿತ್ರವನ್ನು ಪುನರುಚ್ಚಿಸಲು ಸಾಧ್ಯ.

ಬಲತ್ಕಾರ ಹಾಗೂ ಅನೈಸರ್ಗಿಕ ಅಪರಾಧಗಳನ್ನು ಅಲ್ಲಿ ಸಿಕ್ಕ ವೀರ್ಯ, ರಕ್ತ ಅಥವಾ ಇನ್ನಿತರ ಕುರುಹುಗಳ ಪರೀಕ್ಷೆಯಿಂದ ಅಪರಾಧ ನಡೆದಿದೆಯೋ ಅಥವಾ ಇಲ್ಲವೊ ಎಂಬುದನ್ನು ಕಂಡು ಹಿಡಿಯಬಹುದು.

ಮಗುವಿನ ರಕ್ತದಿಂದ ತಂದೆ ತಾಯಿಗಳನ್ನು ಗೊತ್ತು ಹಚ್ಚಬಹುದು. ಅನೇಕ ಸಂದರ್ಭಗಳಲ್ಲಿ ನಿಜವಾದ ಮಗನು ಯಾರು ಎಂಬ ಪ್ರಶ್ನೆ ಬಂದಾಗ, ಮಗುವಿನ ತಂದೆಯನ್ನು

ಗುರುತಿಸುವದೂ ಕೂಡ ಅಪರಾಧ ಶೋದ ಶಾಸ್ತ್ರದ ಕೆಲಸ ವಾಗಿದೆ. ಆಸ್ತಿಯ ವಿಭಜನೆಗಳು ನಡೆದಾಗ ತಾವೂ ಆ ಆಸ್ತಿಗೆ ಹಕ್ಕುದಾರರೆಂದು ನ್ಯಾಯಾಲಯಕ್ಕೆ ಹೋದವರೂ ಉಂಟು. ಇಂಥ ಸಂದರ್ಭಗಳಲ್ಲಿ ಅವರ ರಕ್ತ ಪರೀಕ್ಷೆಯಿಂದ ಮಗುವಿನ ಆಗಿರಬಹುದಾದ ತಂದೆಯನ್ನು ಗುರುತಿಸಬಹುದು. ಒಬ್ಬನು ತಂದೆಯು ನಿಜವಾದ ಮಗನೆಂದು ಖಚಿತವಾಗಿ ಹೇಳುವದ ಕ್ಕಿಂತಲೂ ಅವನು ಇಂಥವನ ಮಗನಲ್ಲ ಎಂದು ಹೇಳುವದು ಬಹಳ ಸುಲಭ.

ಒಮ್ಮೆ ಆದ ಅಪರಾಧವನ್ನು ಮತ್ತೆ ಪ್ರತ್ಯಕ್ಷ ನಡೆದಂತೆ ಮಾಡಿ ನೋಡಿ, ಅದರಿಂದ ಬಂದ ಅನುಭವಗಳ ಆಧಾರದಿಂದ ಅಪರಾಧಿಗಳನ್ನು ಕಂಡು ಹಿಡಿಯಲು ಮುಂದಾದವರಲ್ಲಿ ಹಾನ್ಸ ಗ್ರಾಸ್ (Hans Gross) ಎಂಬ ಆಸ್ಟ್ರೀಯ ದೇಶದ ನ್ಯಾಯಾಧೀಶರು ಮೊದಲಿಗರೆಂದು ಹೇಳಬಹುದು. ಎಲ್ಲ ವಿಜ್ಞಾನಿಗಳ ಸಹಾಯದಿಂದ, ಅಪರಾಧ ಸ್ಥಳದಲ್ಲಿ ದೊರೆತ ಕುರುಹುಗಳನ್ನು ಪತ್ತೆ ಹಚ್ಚಿ, ಅಪರಾಧಿಗಳನ್ನು ಹಿಡಿಯಲು ಮುಂದಾದನು.

ಸೂಕ್ಷ್ಮದರ್ಶಕ ಯಂತ್ರ, ಸ್ಪೆಕ್ಟ್ರೋಸ್ಕೋಪ, ಅಗೋಚರ ಕಿರಣಗಳು, ತುಲನಾತ್ಮಕ ಸೂಕ್ಷ್ಮದರ್ಶಕ, ಮೈಕ್ರೊಟೊಮು, ಸೋಸುವಯಂತ್ರ, ಸಾಂದ್ರತೆ ಪರೀಕ್ಷಿಸುವ ಉಪಕರಣ, ಸ್ಕ್ಯಾನೀಗ ಎಲೆಕ್ಟ್ರೋನ ಮೈಕ್ರೊಸ್ಕೋಪ, ಗ್ಯಾಸ-ಲಿಕ್ವಿಡ್ ಕ್ರೊಮೆಟೋಗ್ರಾಫಿ, ಮುಂತಾದ ಉಪಕರಣಗಳ ಸಹಾಯ ದಿಂದ ಭೌತಿಕ ಪುರಾವೆಗಳನ್ನು ವಿಶ್ಲೇಷಿಸಿ ಅಪರಾಧಿಗಳನ್ನು ಕಂಡುಹಿಡಿಯಲು ಸಾಧ್ಯವಿದೆ.

ಮನುಷ್ಯರ ಹಲ್ಲುಗಳ ಸೂಕ್ಷ್ಮ ಪರೀಕ್ಷೆಯಿಂದ ವ್ಯಕ್ತಿಗಳನ್ನು ಗುರುತಿಸುವ ಶಾಸ್ತ್ರವಂತೂ ತೀರ ಮುಂದುವರೆದಿದೆ. ಯಾವದಾದರೊಂದು ಸ್ಥಳದಲ್ಲಿ ಬಿದ್ದಂತಹ ಅಸ್ಥಿಪಂಜರ, ತಲೆಬುರುಡೆಗಳು ಸಿಕ್ಕಾಗ ಅವುಗಳಿಂದ ಆ ವ್ಯಕ್ತಿಯ ಎತ್ತರ, ವಯಸ್ಸು ಲಿಂಗ ಮುಂತಾದವುಗಳನ್ನು ಗುರುತಿಸಬಹುದು, ಆ ತಲೆಬುರುಡೆ ಇಂಥವನದೇ ಎಂದು ಸಿದ್ಧಮಾಡಿತೋರಿಸಲು ಸಾಧ್ಯವಿದೆ. ಆ ವ್ಯಕ್ತಿಯ ಫೋಟೋ ಸಿಕ್ಕರೆ, ಅದರ ಹಾಗೂ ತಲೆಬುರುಡೆಯ ಫೋಟೋಗಳ ಸಹಾಯದಿಂದ, ಸುಪರ-ಇಂಪೊಜಿಶನ್ ಕಲಾಕೌಶಲ್ಯದಿಂದ, ತಲೆಬುರುಡೆ ಅದೇ ವ್ಯಕ್ತಿಯದೊ ಅಥವಾ ಅಲ್ಲವೋ ಎಂಬುದನ್ನು ತಿಳಿಸಬಹುದು.

ಅದೊಂದು ದಿನ ಮುಂಜಾನೆ ಆ ಹಳ್ಳಿಯ ಊರ ಅಗಸೀ ಬಾಗಿಲಿನಲ್ಲಿ 'ಕಲ್ಲಪ್ಪನ' ಹೆಣ ಬಿದ್ದಿತ್ತು. ಹಳ್ಳಿಯ ಜನ ಗಾಬರಿಗೊಂಡು ಗೌಡರಿಗೆ ತಿಳಿಸಿದರು. ಗೌಡರು ಪೋಲಿಸರನ್ನು ಕರೆಯಿಸಿ ಆ ಹೆಣವನ್ನು ಪರೀಕ್ಷೆಗಾಗಿ K.M.C. ಆಸ್ಪತ್ರೆಗೆ ಕಳಿಸಿದರು. ಹಾಗೂ ಮುಂದಿನ ವಿಚಾರಣೆ ಪ್ರಾರಂಭಿಸಿದರು.

ಡಾಕ್ಟರರ ಹೇಳಿಕೆಯಂತೆ ಕಲ್ಲಪ್ಪನ ಕೊಲೆ ಬೆಳಿಗ್ಗೆ ಮೂರು ಘಂಟೆಗೆ ಕೊಡಲಿ, ಕುಡುಗೋಲುಗಳಿಂದ ಆಗಿದೆಯೆಂದೂ, ಕೊಲೆಯನ್ನು ಬೇರೆ ಕಡೆಗೆ ಮಾಡಿ ಅಗಸಿಯಲ್ಲಿ ಚಲ್ಲಿರುವರೆಂದೂ ತಿಳಿಯಿತು. ಕಲ್ಲಪ್ಪನ ಹೆಂಡತಿಯ ಹೇಳಿಕೆಯ ಪ್ರಕಾರ ಕಲ್ಲಪ್ಪನು ಹಿಂದಿನ ರಾತ್ರಿ ತನ್ನ ಗೆಳೆಯರೊಂದಿಗೆ ಹುಬ್ಬಳ್ಳಿಗೆ 'ಗೌಡರ ಗದ್ಲ' ನಾಟಕ ನೋಡಲು ಹೋದವನು

ತಿರುಗಿ ಬರಲಿಲ್ಲವೆಂದೂ, ಕಲ್ಲಪ್ಪನಿಗೆ ಆಗದವರ ಹೆಸರುಗಳನ್ನೂ ಹೇಳಿದಳು. ಪೋಲೀಸರು ಕಲ್ಲಪ್ಪನ ವೈರಿಗಳನ್ನು ಹಿಡಿದು ೫–೬ ದಿನ ವಿಚಾರಿಸಿದರೂ ಅವರು ಬಾಯಿ ಬಿಡಲಿಲ್ಲ.

ಪೋಲೀಸರು ಕೊನೆಗೆ ದಾರಿ ಕಾಣದೆ ಒಂದು ವಾರದ ನಂತರ ಅಪರಾಧ ಶೋಧ ತಜ್ಞರನ್ನು ಕರೆಸಿ, ಶೋಧನೆ ಮುಂದುವರಿಸಿದರು. ಆ ತಜ್ಞರು ರಕ್ತ ಹಾಗೂ ಆಯುಧಗಳ ಸಲುವಾಗಿ ಆಗಸಿಯ ಸುತ್ತಲೂ ಹುಡುಕಾಡಿದಾಗ, ಒಂದೆರಡು ಹಳದಿ ಬಣ್ಣದ ಕಲೆಗಳು ಹುಲ್ಲಿನ ಮೇಲೆ ಬಿದ್ದಿದ್ದವು. ಅವುಗಳನ್ನು ಪರೀಕ್ಷಿಸಲಾಗಿ ಅವು ರಕ್ತದ ಒಣಗಿದ ಕಲೆಗಳಾಗಿದ್ದವು. ನಂತರ ರಕ್ತದ ಕಲೆಗಳ ಜಾಡು ಕಲ್ಲಪ್ಪನ ತಮ್ಮ ರಾಮಪ್ಪನ ಮನೆಯ ಕಡೆಗೆ ಹೋದ ಸಂಶಯ ಬಂದಿತು. ಆ ಹೆಣವನ್ನು ಅತ್ತ ಕಡೆಯಿಂದಲೇ ಹೊತ್ತುಕೊಂಡು ಬಂದಿರಬಹುದೆಂದು, ರಾಮಪ್ಪನ ಮನೆಯ ಶೋಧನೆ ನಡೆಸಿದರು. ಹೊಸದಾಗಿ ಸಾರಿಸಿದ್ದ ರಾಮಪ್ಪನ ಮನೆಯನ್ನು ಶೋಧಿಸಲಾಗಿ, ಹಿತ್ತಿಲ ಮನೆಯಲ್ಲಿಯ ಮೂಲೆಯಲ್ಲಿಯ ನೆಲದ ಹಕ್ಕಳಿಗಳನ್ನು ಕಿತ್ತು ತೆಗೆದಾಗ, ರಕ್ತದ ಮಣ್ಣು ಅಲ್ಲಿದ್ದದ್ದು ಗೊತ್ತಾಯಿತು. ಇದರಿಂದ ಭಾಗಾದಿಯಾದ ರಾಮಪ್ಪನೇ ತನ್ನ ಅಣ್ಣನನ್ನು ಕೊಲೆ ಮಾಡಿದ್ದಾನೆಂದು ತಿಳಿಸಿದರು. ಪೋಲೀಸರು ರಾಮಪ್ಪನನ್ನು ವಿಚಾರಿಸಿದಾಗ, ಬಣಿವೆಯಲ್ಲಿ ಬಚ್ಚಿಟ್ಟಿದ್ದ ರಕ್ತದ ಅರಿವೆ, ಕೊಡಲಿ, ಕುಡಗೋಲುಗಳನ್ನು ಒಪ್ಪಿಸಿದನು. ಆಸ್ತಿಯ ವಿಭಜನೆಯೆ ಈ ಕೊಲೆಗೆ ಮೂಲ ಕಾರಣವೆಂದು ತಿಳಿಸಿ, ಕಲ್ಲಪ್ಪ ಹುಬ್ಬಳ್ಳಿಗೆ ಹೋದದ್ದು ತಿಳಿದು ಆತ ಬರುವವರೆಗೂ ತನ್ನ ಇತರ

ಮೂವರು ಸಹಚರರೊಂದಿಗೆ ಕಾದು ಕುಳಿತು, ಕಲ್ಲಪ್ಪ ಬರುತ್ತಿದ್ದಂತೆಯೇ ಅವನನ್ನು ಹೊತ್ತುಕೊಂಡು ಹೋಗಿ ಕೊಲೆ ಮಾಡಿದ್ದಾಗಿ ಒಪ್ಪಿಕೊಂಡ. ನ್ಯಾಯಾಲಯದಲ್ಲಿ ರಾಮಪ್ಪನಿಗೆ ಜೀವಾವಧಿ ಶಿಕ್ಷೆ ಹಾಗೂ ಇತರರಿಗೆ ತಲಾ ಏಳು ವರ್ಷ ಕಠಿಣ ಶಿಕ್ಷೆ ವಿಧಿಸಲ್ಪಟ್ಟಿತು.

## ೬. ಅಪರಾಧ ಶೋಧ ಶಾಸ್ತ್ರದ ತತ್ವಗಳು :

## (Principles of Forensic Science)

ಎಲ್ಲ ನೈಸರ್ಗಿಕ ವಿಜ್ಞಾನಗಳ ಕಾಯಿದೆ ಮತ್ತು ತತ್ವಗಳು ಅಪರಾಧ ಶೋಧ ಶಾಸ್ತ್ರದ ತಳಹದಿಯಾಗಿವೆ ಎಂದು ಹೇಳಬಹುದು. ಇವುಗಳ ಜೊತೆಗೆ ಈ ಶಾಸ್ತ್ರ ತನ್ನದೇ ಆದ, ಕೆಲವು ತತ್ವಗಳನ್ನು ಬೆಳಸಿಕೊಂಡು ಅಪರಾಧಿಗಳನ್ನು ಹಿಡಿಯಲು ಪ್ರಯತ್ನಿಸುತ್ತಿದೆ.

### ೧) ವಿಶಿಷ್ಟ ವ್ಯಕ್ತಿತ್ವ ತತ್ವ: (Law of Individuality)

"ಮನುಷ್ಯರಿಂದಾಗಲೀ, ಇಲ್ಲವೆ ದೇವರಿಂದಾಗಲೀ ಸೃಷ್ಟಿ ಮಾಡಿದ ಯಾವ ಎರಡು ವಸ್ತುಗಳೂ ಒಂದರಂತೆ ಇನ್ನೊಂದು ಇರುವದಿಲ್ಲ." ನೈಸರ್ಗಿಕ ಅಥವಾ ಮಾನವ ನಿರ್ಮಿತ ಪ್ರತಿಯೊಂದು ವಸ್ತುವಿಗೂ ಈ ವಿಶಿಷ್ಟ ವ್ಯಕ್ತಿತ್ವ ಇದ್ದೇ ಇರುತ್ತದೆ. ಯಾವ ಎರಡು ವಸ್ತುಗಳೂ ಒಂದನ್ನೊಂದು ಹೋಲುವದಿಲ್ಲ. ಪ್ರತಿಯೊಂದು ವಸ್ತುವಿನ ವ್ಯಕ್ತಿತ್ವದ ಲಕ್ಷಣಗಳನ್ನು

ನಕಲು ಮಾಡಲು ಸಾಧ್ಯವಿಲ್ಲ. ಎರಡು ಉಸುಕಿನ ಕಣಗಳು, ಎರಡು ಎಲೆಗಳು ಅವಳಿ ಜವಳಿಯಂತೆ ಕಾಣಬಹುದು. ಆದರೆ ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅವು ಒಂದನ್ನೊಂದು ಹೋಲುವ ದಿಲ್ಲ. ಅದೇ ರೀತಿ ಅಪರಾಧದಲ್ಲಿ ಸಿಕ್ಕ ಕೂದಲು, ಗುಂಡು ಗಳು, ಮಣ್ಣು, ಬೆರಳಚ್ಚುಗಳು ವಿಂಗಡಿಸಲು ಬಾರದಂತೆ ಕಾಣಬಹುದು. ಆದರೆ ವಿಜ್ಞಾನದಿಂದ ಅವುಗಳನ್ನು ಪ್ರತ್ಯೇಕಿಸ ಬಹುದು. ಇದರಿಂದ ಅಪರಾಧಕ್ಕೆ ಅಪರಾಧಿಯನ್ನು ಜೋಡಿಸಿ, ಅಪರಾಧವನ್ನು ಸಿದ್ಧ ಮಾಡಿ ತೋರಿಸಬಹುದು.

ಉದಾ : ಕೆಲವು ಸಲ ಅಪರಾಧಿಗಳು ಕಳ್ಳತನ ಮಾಡಿದ ನಂತರ ಅಲ್ಲಿದ್ದ ಸೇಬು, ಪೇರು ಮುಂತಾದ ಹಣ್ಣುಗಳನ್ನು ತಿಂದು ಒಗೆದು ಹೋಗಿರಬಹುದು. ಆಗ ಉಳಿದಿದ್ದ ಸೇಬು ಹಣ್ಣಿನ ಮೇಲೆ ಇದ್ದ ಹಲ್ಲಿನ ಗುರುತುಗಳು ಅಪರಾಧಿಯನ್ನು ಪತ್ತೆ ಹಚ್ಚಲು ಸಹಾಯಕವಾಗುತ್ತವೆ. ಪ್ರತಿಯೊಬ್ಬರ ಹಲ್ಲು ಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅವುಗಳ ಆಕಾರ, ಇರುವ ಪದ್ಧತಿ ಮುಂತಾದವುಗಳು ಬೇರೆ ಬೇರೆ ರೀತಿಯಲ್ಲಿ ಇರುವವು.

## ೨) ವಿನಿಮಯ ತತ್ವ : (Principles of Exchange)

"ಎರಡು ವಸ್ತುಗಳು ಒಂದಕ್ಕೊಂದು ಸಂಬಂಧ ಬೆಳೆಸಿ ದಾಗ ಒಂದು ವಸ್ತುವಿನ ಕಲೆಗಳು ಅಥವಾ ಕುರುಹುಗಳು ಮತ್ತೊಂದು ವಸ್ತುವಿಗೆ ವರ್ಗವಾಗುತ್ತವೆ, ಅಂಟಿಕೊಳ್ಳುತ್ತವೆ." ಈ ಕುರುಹುಗಳು ಚನ್ನಾಗಿ ಕಾಣಬಹುದು, ಮಸಕಾಗಿರ

ಬಹುದು ಅಥವಾ ಕಾಣದೇ ಇರಬಹುದು. ಇವುಗಳನ್ನು ಗುರುತಿಸಬೇಕಾಗುತ್ತದೆ. ಅಪರಾಧ ಕೃತ್ಯದಲ್ಲಿ ಸಂಪರ್ಕ ಬರುವ ಎಲ್ಲ ವಸ್ತುಗಳಲ್ಲಿ ಈ ವಿನಿಮಯ ನಡೆಯುತ್ತದೆ. ಇದಕ್ಕೆ ಲೊಕಾರ್ಡನ ವಿನಿಮಯದ ತತ್ವವೆಂದೂ ಅನ್ನುತ್ತಾರೆ. ಈ ಬದಲಾವಣೆಗಳ ಬೆನ್ನುಹತ್ತಿ ಅದರ ಮೂಲದವರೆಗೆ ಹೋದಾಗ ಅಪರಾಧದ ಶೋಧವಾಗುತ್ತದೆ.

ಉದಾ : ಕೂದಲು, ಬಟ್ಟೆಯ ಚೂರು, ಕೈಕಾಲುಗಳ ಗುರುತುಗಳು, ರಕ್ತ, ವೀರ್ಯ, ಆಯುಧಗಳು ಹಾಗೂ ಇನ್ನಿತರ ವಸ್ತುಗಳನ್ನು ಅಪರಾಧಿಗಳು ಅಪರಾಧ ನಡೆದ ಸ್ಥಳದಲ್ಲಿ ಬಿಟ್ಟು ಹೋಗಿರುತ್ತಾರೆ. ಇಷ್ಟೇ ಅಲ್ಲದೇ ಅಪರಾಧಿಯು ತನ್ನ ಜೊತೆಗೆ ಆ ಸ್ಥಳದಲ್ಲಿಯ ಮಣ್ಣು, ಹುಡಿ, ಗಾಜು, ರಕ್ತ, ಕೂದಲು, ಬಣ್ಣ, ಮುಂತಾದವುಗಳನ್ನು ಉಗುರು, ಬಟ್ಟೆ, ಬೂಟುಗಳಲ್ಲಿ ತನಗೆ ಅರಿವಿಲ್ಲದೇ ಒಯ್ದಿರುತ್ತಾನೆ. ಹೆಜ್ಜೆ ಮತ್ತು ಹಲ್ಲಿನ ಗುರುತುಗಳ ಸಹಾಯದಿಂದ ಅಪರಾಧ ನಡೆದ ಸ್ಥಳದಲ್ಲಿ ಆರೋಪಿಯು ಇದ್ದನು ಎಂದು ಸಿದ್ಧಮಾಡಬಹುದು. ಅಪರಾಧ ನಡೆದ ಸ್ಥಳದಲ್ಲಿಯ ಆಯುಧಗಳ ಗುರುತುಗಳ ಆಧಾರದ ಮೇಲೆ, ಆಯುಧ ಹೊಂದಿದ ಮನುಷ್ಯನು ಅಪರಾಧಮಾಡಿರ ಬಹುದೆಂದು ಉಹಿಸಬಹುದು. ಟಾಯರ ಗುರುತುಗಳಿಂದ ಅವನು ಎಂಥಹ ವಾಹನ ಉಪಯೋಗಿಸುತ್ತಿದ್ದಾನೆ ಎಂಬು ದನ್ನು ಉಹಿಸಿ ವಾಹನದ ಜಾಡನ್ನು ಪತ್ತೆಹಚ್ಚಬಹುದು. ಈ ರೀತಿ ನಿಜವಾದ ಅಪರಾಧಿಯನ್ನು ಬೆರಳಿಟ್ಟು ತೋರಿಸ ಬಹುದು. ಅಪರಾಧಿಯ ಹಾಜರಿಯನ್ನು ಸಿದ್ಧಪಡಿಸಿದರೆ

ಉಳಿದ ರಹಸ್ಯಗಳೆಲ್ಲ ತನ್ನಿಂದ ತಾನೇ ಒಂದೊಂದಾಗಿ ಬಯಲಿಗೆ ಬರುವವು.

### ೩) ಹೆಚ್ಚು ಬದಲಾಗುತ್ತ ಹೋಗುವ ತತ್ವ : (Law of progressive change)

"ಕಾಲದೊಂದಿಗೆ ಪ್ರತಿಯೊಂದು ವಸ್ತುವೂ ಬದಲಾಗುತ್ತ ಹೋಗುತ್ತದೆ. ಅಪರಾಧಿಯು ದಾಡಿ, ಮೀಸೆಯನ್ನು ಬಿಟ್ಟು ಬದಲಾಗಬಹುದು. ಆರೋಪಿಯ ಕೈ ಬೆರಳುಗಳು ಮತ್ತು ಶಾಶ್ವತ ಕಲೆಗಳನ್ನು ಮಾತ್ರ ಬಿಟ್ಟು ಉಳಿದವು ಗುರುತಿಸಲು ಬಾರದಷ್ಟು ಬದಲಾಗಬಹುದು. ಅಪರಾಧ ನಡೆದ ಸ್ಥಳಗಳೂ ಕೂಡ ತೀವ್ರ ಗತಿಯಲ್ಲಿ ಬದಲಾಗುವವು. ಅಪರಾಧದಲ್ಲಿ ತೊಡಗಿದ ಆಯುಧಗಳು ದಿನ ಕಳೆದಂತೆ ಬದಲಾಗುತ್ತವೆ. ಶವವೂ ಬದಲಾಗುವದು. ಹೀಗೆ ಈ ತರಹದ ಬದಲಾಗುವ ಪರಿಮಾಣವು ಬೇರೆ ಬೇರೆ ವಸ್ತುಗಳಿಗೆ ಬೇರೆ ಬೇರೆಯಾಗಿರುತ್ತದೆ. ಅಪರಾಧ ಶೋಧದ ಕೆಲಸವನ್ನು ತ್ವರಿತಗತಿಯಿಂದ ನಡೆಸಿದರೆ ಅಪರಾಧಿಯನ್ನು ಬೇಗನೆ ಹಿಡಿಯಲು ಅನುಕೂಲವಾಗುವದು,

### ೪) ಹೋಲಿಸುವ ತತ್ವ (Principles of comparision)

ಒಂದೇ ತೆರನಾಗಿ ಇರುವ ವಸ್ತುಗಳನ್ನು ಹೋಲಿಸಿ ನೋಡಲು ಬರುವದು. ಬೇರೆ ರೀತಿ ಕಾಣುವ ವಸ್ತುಗಳನ್ನು ತುಲನೆ ಮಾಡಲು ಬರುವದಿಲ್ಲ. ಅಗ್ನ್ಯಾಸ್ತ್ರ ಶಾಸ್ತ್ರಜ್ಞನು ರೈಫಲ್ ಗಳಿಂದ ಗುಂಡುಗಳನ್ನು ಹಾರಿಸಿದ್ದಾರೆ ಎಂದು ಹೇಳಿದರೆ,

ಪಿಸ್ತೂಲು, ಕೋವಿಗಳನ್ನು ಪರೀಕ್ಷೆಗೆ ಕಳಿಸಬಾರದು. ಕೇವಲ ರೈಫಲ್‌ಗಳನ್ನೇ ಕಳಿಸಿದರೆ ಅವನು ಯಾವುದರಿಂದ ಹಾರಿಸಿದೆ ಎಂದು ಹೇಳಬಹುದು. ಗಾಜಿನ ತುಂಡುಗಳನ್ನು ಬೇರೆ ಗಾಜಿನ ತುಂಡುಗಳಿಂದಲೇ ತುಲನೆ ಮಾಡಬೇಕಾಗುವದು.

**೫) ವಿಶ್ಲೇಷಣೆಯ ತತ್ವ : (principles of analysis)**

ವಿಶ್ಲೇಷಣೆಗೆ ತೆಗೆದುಕೊಳ್ಳುವ ವಸ್ತುವಿಗಿಂತ ವಿಶ್ಲೇಷಣೆ ಮಾಡಿದ ವಸ್ತುವು ಬೇರೆಯಾಗಿರುವವಲ್ಲದೆ ಹೆಚ್ಚು ಪ್ರಯೋಜನಕ್ಕೆ ಬರುವದಿಲ್ಲ. ಬಲಾತ್ಕಾರ ಸಂಭೋಗ ಕೇಸಿನಲ್ಲಿ ಪೋಲೀಸರು ಆರೋಪಿಗಳ ಅರಿವೆಗಳನ್ನು ಪ್ರಯೋಗಾಲಯಕ್ಕೆ ಕಳಿಸುತ್ತಾರೆ. ಈ ಅರಿವೆಗಳಲ್ಲಿ ರಕ್ತ ಹಾಗೂ ವೀರ್ಯ ಎರಡೂ ಕಲೆಗಳೂ ಇರಬಹುದು. ರಕ್ತ ಒಣಗಿ ಪುಡಿಪುಡಿಯಾಗಿ ವೀರ್ಯದ ಜೊತೆ ಕಲೆತು ಅವುಗಳನ್ನು ಬದಲು ಮಾಡಲು ಸಾಧ್ಯ. ಆಗ ವಿಧಿವಿಜ್ಞಾನಿಯು ರಕ್ತವನ್ನು ಕುರಿತು ವಿವರವಾಗಿ ಹೇಳಿದರೂ, ವೀರ್ಯದ ಬಗ್ಗೆ ಹೆಚ್ಚಿನ ಮಾಹಿತಿ ಕೊಡಲಾರ. ಆದ್ದರಿಂದ ಈ ತತ್ವದ ಪ್ರಕಾರ ಸರಿಯಾದ ಮಾದರಿಗಳನ್ನು ಮತ್ತು ಸರಿಯಾಗಿ ವಿಂಗಡಿಸಲಿಕ್ಕೆ ಬರುವಂತೆ ಕಳಿಸಿಕೊಡಲು ಹೇಳುತ್ತದೆ.

**೬) ಸಂಭವನೀಯ ತತ್ವ ; (Law of probability):**

ಯಾವದೊಂದು ಅಪರಾಧದ ಘಟನೆಯು ಯಾವಾಗ, ಹೇಗೆ ಸಂಭವಿಸಿತೆಂಬುದನ್ನು ನಿರ್ಣಯಿಸಲು ಸಂಭವ ಹಾಗೂ

ಅಸಂಭವಗಳೆರಡನ್ನೂ ತೂಗಿ ನೋಡಿ, ಆಗಿರುವ ಇಲ್ಲವೆ ಆಗದಿರುವ ಬಗ್ಗೆ ಹೇಳಬಹುದು. ಇದನ್ನು ಸಂಖ್ಯಾ ವಿದ್ಯೆಯ ಕಲ್ಪನೆಯಿಂದ ಅಪರಾಧ ಶಾಸ್ತ್ರದಲ್ಲಿ ಉಪಯೋಗಿಸುತ್ತೇವೆ. ಅಪರಾಧ ಜರುಗಿದ ಪ್ರಕಾರಗಳು ವಿವಿಧವಾಗಿರುವದರಿಂದ ಸಂಭವ, ಅಸಂಭವಗಳ ಬದಲಾವಣೆ ಸಾಧ್ಯವಿರುತ್ತದೆ.

ಉದಾ : ಒಂದು ನಾಣ್ಯವನ್ನು ಹಾರಿಸಿದಾಗ ಅದು ಪ್ರತಿ ಸಲ ನೆಲಕ್ಕೆ ಎರಡು ಮೈಗಳಲ್ಲಿ ಬೇಕಾದ ಒಂದು ಮೈಯನು ಮೇಲ್ಮಾಡಿ ಬೀಳಬಹುದು. ಅಂದರೆ ಆ ನಾಣ್ಯದ ಎರಡೂ ಮೈಗಳಿಗೆ ಸರಿಯಾದ ಚಾನ್ಸು ಇರುತ್ತದೆ.

**೭) "ವಸ್ತು ಸ್ಥಿತಿ ಸುಳ್ಳು ಹೇಳದು" :**
**(Facts do not lie)**

"ವಸ್ತುಗಳ ನಿಜ ಸ್ಥಿತಿ ಸುಳ್ಳು ಹೇಳದು, ಆದರೆ ಮನುಷ್ಯ ಹೇಳಬಲ್ಲ." ಆದ್ದರಿಂದ ಪ್ರತ್ಯಕ್ಷ ಪ್ರಸಂಗಗಳ ಪುರಾವೆಗಳಿಗೆ ಹಾಗೂ ಭೌತಿಕ ಸಾಕ್ಷಿಗಳಿಗೆ ಹೆಚ್ಚು ಮಹತ್ವವಿರುತ್ತದೆ. ಮನುಷ್ಯರು ಹೇಳಿದ ಸಾಕ್ಷಿ ಪುರಾವೆಗಳಿಗೆ ಬಣ್ಣ ಕೊಟ್ಟಿರಬಹುದು, ಪರಿಸ್ಥಿತಿಗೆ ಅನುಗುಣವಾಗಿ ಬದಲಾಯಿಸಲೂಬಹುದು. ಆದರೆ ಈ ಸಂಶಯ ಪ್ರತ್ಯಕ್ಷ ಪ್ರಸಂಗಗಳ ಪುರಾವೆ, ಕುರುಹುಗಳಿಗೆ ಬರಲಾರದು. ಯಾಕೆಂದರೆ ಅವುಗಳ ವಸ್ತು ಸ್ಥಿತಿ ಬದಲಾಗುವದಿಲ್ಲ. ಆದರೆ ಕೆಲವು ಸಂದರ್ಭದಲ್ಲಿ ವಸ್ತುಸ್ಥಿತಿಯನ್ನು ನಿರ್ಮಿಸಬಹುದು.

ಪಾದಗಳ ಗುರುತುಗಳಿಂದ ಪ್ರಾಣಿಗಳನ್ನೂ ಮಾನವರನ್ನೂ ಗುರುತಿಸುವದು ಬಹಳ ಪ್ರಾಚೀನವಾದದ್ದು. ಆದರೆ

ಅಪರಾಧಗಳ ಪತ್ತೆಯಲ್ಲಿ ಇದನ್ನು ಶಾಸ್ತ್ರೀಯವಾಗಿ ಪ್ರಯೋಗಿಸಲು ಪ್ರಾರಂಭಿಸಿದ್ದು ಇತ್ತೀಚಿನ ವರ್ಷಗಳಲ್ಲಿ. ಸಾಮಾಜಿಕ ಮತ್ತು ಧಾರ್ಮಿಕ ಉದ್ದೇಶಗಳಿಗಾಗಿ ಪಾದಗಳ ಗುರುತುಗಳನ್ನು ಉಪಯೋಗಿಸುತ್ತಿದ್ದುದು ಕಂಡು ಬಂದಿದೆ.

ಮೂರು ಸಾವಿರ ವರ್ಷಗಳ ಹಿಂದೆ ಈ ವಿಧಾನವು ಗೊತ್ತಿತ್ತು ಎಂದು ನಮ್ಮ ಪ್ರಾಚೀನ ಗ್ರಂಥಗಳಿಂದ ತಿಳಿದು ಬಂದಿದೆ. ಭಾಗವತದಲ್ಲಿ ಶ್ರೀಕೃಷ್ಣನ ಹೆಜ್ಜೆಯ ಗುರುತುಗಳ ಸಹಾಯದಿಂದ ಅವನನ್ನು ಗುರುತಿಸಿದರು. ಜೈನರ ಬಸದಿಯಲ್ಲಿ ಜೈನ ಭಕ್ತರಿಗಾಗಿ, ಜೈನ ಭಕ್ತರಲ್ಲಿ ಭಕ್ತಿ ಹೆಚ್ಚಿಸುವದಕ್ಕಾಗಿ ೨೪ ನೇ ತೀರ್ಥಂಕರರ ಹೆಜ್ಜೆ ಗುರುತುಗಳನ್ನು ಆದರ್ಶವಾಗಿ ಇಟ್ಟುಕೊಂಡಿದ್ದಾರೆ. ಹೆಜ್ಜೆಯ ಗುರುತುಗಳು ಅಥವಾ ಪಾದದ ಆಕಾರ, ಇವುಗಳ ಬಗ್ಗೆ ಅನೇಕ ನಂಬಿಕೆಗಳು ಇವೆ. ಪಾದದ ಮತ್ತು ಹಸ್ತದ ಗೆರೆಗಳ ಅಧ್ಯಯನದಿಂದ ಭವಿಷ್ಯವನ್ನು ಕಂಡು ಹಿಡಿಯುವ ಶಾಸ್ತ್ರಗಳು ಬೆಳೆದಿದ್ದವು. ಪಾದದ, ಆಕಾರ, ಬೆರಳುಗಳ ಆಕಾರ, ಗೆರೆಗಳ ಬಗ್ಗೆ ಅನೇಕ ಉಪಕಲ್ಪನೆಗಳು ರೂಪಿಸಲ್ಪಟ್ಟಿವೆ. ಪಾದದ ಆಕಾರದ ಮೇಲೆ ಜನರ ಬುದ್ಧಿಮತ್ತೆಯನ್ನೂ ನಡವಳಿಕೆಯನ್ನೂ ಅರಿತುಕೊಳ್ಳುವ ಪ್ರಯತ್ನ ನಡೆದಿದೆ.

ಈಗ ಅಪರಾಧಿಗಳ ತನಿಖೆಯಲ್ಲಿ ಪಾದದ ಗುರುತುಗಳನ್ನು ಶಾಸ್ತ್ರೀಯವಾಗಿ ಬಳಸುವ ಪ್ರಯತ್ನ ನಡೆದಿದೆ. ಆದ್ದರಿಂದ ಅಪರಾಧ ನಡೆದ ಜಾಗೆಗಳಲ್ಲಿರುವ ಹೆಜ್ಜೆಯ ಗುರುತುಗಳನ್ನು ನಾಶ ಮಾಡದಂತೆ ನೋಡಿಕೊಳ್ಳಬೇಕು. ಯಾಕಂದರೆ

ತನಿಖಾಧಿಕಾರಿಗೆ ಅಪರಾಧ ನಡೆದ ಜಾಗದಲ್ಲಿ ಹೆಜ್ಜೆಯ ಗುರುತು ಗಳು ಅಪರಾಧಿಯನ್ನು ಗುರುತಿಸಲು ಬಲವಾದ ಸಾಕ್ಷಿಗಳಾಗುತ್ತವೆ. ಅಪರಾಧಿಯು ದುಷ್ಕೃತ್ಯ ಮಾಡಿ ಹೋಗಿರುವ ದಾರಿಯನ್ನು ಪರೀಕ್ಷಿಸುವದರಿಂದ ಅವನ ಜಾಡನ್ನು ಗುರುತಿಸಬಹುದು. ಸ್ಥಳ ಗೊತ್ತಿಲ್ಲದ (ದಾರಿ) ಹೊಸಬನಾಗಿದ್ದರೆ ಕಲ್ಲು ಮುಳ್ಳುಗಳ, ಪೊದೆಗಳ ಮೇಲೆ ಹೋಗುತ್ತಾನೆ. ದಾರಿ ಗೊತ್ತಿರುವ ಸ್ಥಳೀಯ ವ್ಯಕ್ತಿಯಾಗಿದ್ದರೆ, ದಾರಿಯಲ್ಲಿ ಹೋಗಿರುತ್ತಾನೆ. ಪಾದದಲ್ಲಿಯ ಬೆರಳು ಗುರುತುಗಳು ಪ್ರತಿ ವ್ಯಕ್ತಿಯ ಹೆಜ್ಜೆಯ ಗುರುತುಗಳನ್ನು ಹಿಡಿಯಲು ಸಹಾಯಕವಾಗುತ್ತವೆ. ಹೆಜ್ಜೆಯ ಗುರುತುಗಳಿಂದ ಸಾವಕಾಶವಾಗಿ ಹೋಗಿರುವನೋ ಅಥವಾ ಓಡಿ ಹೋಗಿರುವನೋ ಎಂಬುದನ್ನು ತಿಳಿಯಬಹುದು. ಬೂಟ್ಸ, ಚಪ್ಪಲ್, ಹವಾಯಿ ಮುಂತಾದವುಗಳು ಅವುಗಳ ಉದ್ದ, ಅಗಲ, ಆಕಾರ, ಸವೆದಿರುವಿಕೆ, ಮೊಳೆಗಳ ಗುರುತುಗಳು ಇತ್ಯಾದಿಗಳಿಂದ ಅಪರಾಧಿಯನ್ನು ಕಂಡು ಹಿಡಿಯಬಹುದು.

ಹೆಜ್ಜೆಯ ಗುರುತುಗಳು ನೆಲದ ಮೇಲಿರಬಹುದು, ಹಸಿ ಮಣ್ಣಿನಲ್ಲಿರಬಹುದು, ಉಸುಕಿನಲ್ಲಿರಬಹುದು, ಬರ್ಫದಲ್ಲಿರಬಹುದು, ಈ ರೀತಿಯ ಗುರುತುಗಳನ್ನು ಛಾಯಾಚಿತ್ರ, ಟ್ರೇಸಿಂಗ, ಮೇಣ, ಪ್ಲಾಸ್ಟರ ಆಫ್ ಪ್ಯಾರಿಸ್‌ಗಳಿಂದ ಮಾದರಿಯನ್ನು ಪಡೆದು ಕಾಯ್ದಿರಿಸಿಕೊಳ್ಳಬಹುದು. ಯಾಕೆಂದರೆ ನ್ಯಾಯಾಲಯದಲ್ಲಿ ಅವುಗಳ ಅವಶ್ಯಕತೆಯು ಇರುತ್ತದೆ.

ರಾಜಸ್ಥಾನ, ಮಹಾರಾಷ್ಟ್ರ, ಗುಜರಾತ, ಮತ್ತು ಪಂಜಾಬ ರಾಜ್ಯಗಳಲ್ಲಿ "ಕೂಜಿ"ಗಳೆಂಬ ಜನರು ಹೆಜ್ಜೆಯ

ಗುರುತುಗಳನ್ನು ಹಿಂಬಾಲಿಸಿ ಹೋಗಿ ಕಳ್ಳರನ್ನು ಪತ್ತೆ ಮಾಡಿದ ಅನೇಕ ಉದಾಹರಣೆಗಳಿರುವವು.

ಉದಾ : ರಾಜಸ್ಥಾನದ ಒಂದು ಹಳ್ಳಿಯಲ್ಲಿ ಕಳವಾಗಿತ್ತು. ತನಿಖಾಧಿಕಾರಿಯು ಒಂದು ತನಿಖೆ ನಡೆಸಿದಾಗ ಅಲ್ಲಿ ಯಾವ ಪ್ರಾಕೃತ ಪುರಾವೆಗಳೂ ಸಿಗಲಿಲ್ಲ. ಆದರೆ ಊರ ಹೊರಗಡೆ ಒಂದು ಗಿಡದ ಕೆಳಗೆ ಒಂಟೆ ಹೆಜ್ಜೆಗಳಿದ್ದವು. ಅವು ಉತ್ತರ ದಿಕ್ಕಿಗೆ ಹೋಗಿದ್ದುದು ಕಂಡಿತು. ತನಿಖಾಧಿಕಾರಿ ಊರೆಲ್ಲ ವಿಚಾರಿಸಿದಾಗ ಹಿಂದಿನ ರಾತ್ರಿ ಯಾರೂ ಒಂಟೆಯ ಮೇಲೆ ಉತ್ತರ ದಿಕ್ಕಿನ ಹಳ್ಳಿಗೆ ಹೋಗಿಲ್ಲವೆಂದು ಖಚಿತವಾಯಿತು. ನಂತರ ಈ ಗುರುತುಗಳ ಪರೀಕ್ಷೆಗಾಗಿ ಒಬ್ಬ ಕೂಜಿಯನ್ನು ಕರೆ ತಂದನು. ಈತನು ಅವುಗಳನ್ನು ಪರೀಕ್ಷಿಸಿ "ಈ ಹೆಜ್ಜೆಯ ಗುರುತುಗಳು ಹೆಣ್ಣು ಒಂಟೆಯವು, ಅದು ಬಸಿರಾಗಿತ್ತು. ಅದರ ಬಲಗಣ್ಣು ಕುರುಡು ಇದೆಯೆಂದೂ, ಮತ್ತು ಅದರ ಕೊರಳಲ್ಲಿ ಒಂದು ಕಬ್ಬಿಣದ ಸರಪಳಿ ಇದೆ ಎಂದೂ ಹೇಳಿದನು. ಈ ಮಾಹಿತಿ ಪ್ರಕಾರ ತನಿಖಾಧಿಕಾರಿಯು ಉತ್ತರ ದಿಕ್ಕಿನ ಹಳ್ಳಿಗೆ ಹೋಗಿ ಕುರುಡು ಒಂಟೆಯ ಯಜಮಾನನನ್ನು ಬಂಧಿಸಿ, ಅವನಲ್ಲಿ ಸಿಕ್ಕ ಕಳವಿನ ಮಾಲನ್ನು ವಶಪಡಿಸಿಕೊಂಡನು.

ಆ ಕೂಜಿಯು, ಹೆಜ್ಜೆಯ ಗುರುತುಗಳು ಸಾಮಾನ್ಯ ಒಂಟೆ ಹೆಜ್ಜೆಗಳಿಗಿಂತ ಅಗಲ ಹಾಗೂ ನಿಧಾನವಾಗಿದ್ದವು. ಆದ್ದರಿಂದ ಅದು ಬಸಿರಾಗಿರಬಹುದೆಂದೂ, ಅದು ದಾರಿ ಯುದ್ದಕ್ಕೂ ಕೇವಲ ಎಡಕ್ಕೆ ಇದ್ದ ಗಿಡಗಳ ತಪ್ಪಲು ತಿಂದಿತ್ತು. ಅದಕ್ಕೇ ಅದು ಕುರುಡಿ (ಬಲಗಣ್ಣು) ಯಾಗಿರಬಹುದೆಂದೂ,

ನಡುನಡುವೆ ಸರಪಳಿ ಬಡಿದ ಗಿಡಗಂಟಿಗಳು ಮುರಿದಿದ್ದರಿಂದ ಅದರ ಕೊರಳಲ್ಲಿ ಸರಪಳಿ ಇರಬಹುದೆಂದೂ ಊಹಿಸಿದ್ದನು.

## ೭. ಭಾರತದಲ್ಲಿ ಅಪರಾಧ ಶೋಧ ಶಾಸ್ತ್ರದ ಬೆಳವಣಿಗೆ :

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಗ್ರಾಮೀಣ ಸಮಾಜಕ್ಕೆ ಹೊಂದಿಕೊಳ್ಳುವಂತಹ ಪೋಲೀಸು ಅಥವಾ ರಕ್ಷಣಾ ಪಡೆಯ ವ್ಯವಸ್ಥೆ ಇತ್ತು. ಸಮಾಜ ಘಾತುಕರನ್ನು ಶಿಕ್ಷಿಸುವ ಕೆಲಸ ಅವರದಾಗಿತ್ತು. ಗೂಢಚಾರ ಪಡೆಗಳೂ ಸಾರ್ವಜನಿಕ ವರ್ತನೆಗಳನ್ನು ತಿಳಿದುಕೊಳ್ಳಲು ರಾಜ, ಮಹಾರಾಜರುಗಳಿಗೆ ಸಹಾಯಕವಾಗಿದ್ದವು.

ಮುಸಲ್ಮಾನರ ಆಳಿಕೆಯಲ್ಲಿ ಫೌಜದಾರ ಪದ್ಧತಿಯಿಂದ ಶಾಂತಿ, ಶಿಸ್ತನ್ನು ಕಾಪಾಡಿಕೊಳ್ಳುತ್ತಿದ್ದರು. ನಂತರ ಬ್ರಿಟಿಷರು ಪಾಶ್ಚಿಮಾತ್ಯ ಮಾದರಿಯ ಪೋಲೀಸ ಆಡಳಿತೆಯನ್ನು ಜಾರಿಗೆ ತಂದರು. ಕೇಂದ್ರ ಗುಪ್ತಚಾರ ಪಡೆಗಳು, ಕೇಂದ್ರ ಪೋಲೀಸು ಹಾಗೂ ರಾಜ್ಯ ಪೋಲೀಸ ಪಡೆಗಳು ಶಾಂತಿ, ಶಿಸ್ತನ್ನು ಕಾಪಾಡಲೂ ಮತ್ತು ಅಪರಾಧಿಗಳನ್ನು ಕಂಡುಹಿಡಿದು ಶಿಕ್ಷಿಸಲೂ ಸಹಾಯಮಾಡುತ್ತಿವೆ.

ವೈಜ್ಞಾನಿಕ ಸಹಾಯದಿಂದ ಅಪರಾಧಿಗಳನ್ನು ಪತ್ತೆ ಹಚ್ಚಲು ೧೮೫೩ರಲ್ಲಿ ಸರಕಾರಿ ರಾಸಾಯನಿಕ ಪರೀಕ್ಷಾ ಪ್ರಯೋಗ ಶಾಲೆಯನ್ನು ಕಲ್ಕತ್ತಾದಲ್ಲಿ ಸ್ಥಾಪಿಸಲಾಯಿತು. ಇಲ್ಲಿ ಪೋಲೀಸ ಇಲಾಖೆಯು ಕಳಿಸಿದ ವಸ್ತುಗಳನ್ನು ಪರೀಕ್ಷಿಸಿ ತನ್ನ ತಜ್ಞ ಅಭಿ

ಪ್ರಾಯಗಳನ್ನು ಕೊಡುತ್ತಿತ್ತು. ಇದೊಂದೇ ಸಾಲದ್ದಕ್ಕೆ ಇದೇ ತರಹದ ಪ್ರಯೋಗ ಶಾಲೆಗಳನ್ನು ಆಯಾ ರಾಜ್ಯಗಳ ರಾಜಧಾನಿಗಳಲ್ಲಿ ಸುರುವು ಮಾಡಲಾಯಿತು. ೧೯೦೬ ರಲ್ಲಿ ಭಾರತ ಸರಕಾರದ ಸಂಶಯಿತ ಕಾಗದ ಪತ್ರಗಳನ್ನು ಪರೀಕ್ಷಿಸುವ ಪ್ರಯೋಗ ಶಾಲೆಯು ಸಿಮ್ಲಾದಲ್ಲಿ ಸ್ಥಾಪಿಸಲ್ಪಟ್ಟಿತು. ಕೈಬೆರಳಚ್ಚುಗಳನ್ನು ವಿಂಗಡಿಸುವ, ಗುರುತಿಸುವ ಹಾಗೂ ಕಾಯ್ದಿಡುವ ಕೆಲಸಕ್ಕಾಗಿ, ೧೯೧೦ ರಲ್ಲಿ ಕೈಬೆರಳಚ್ಚು ಕಚೇರಿಯು ಕಲ್ಕತ್ತಾದಲ್ಲಿ ಸ್ಥಾಪಿಸಲ್ಪಟ್ಟಿತು.

ಪಾಶ್ಚಿಮಾತ್ಯ ದೇಶಗಳಲ್ಲಿ ಉಪಯೋಗಿಸಲ್ಪಡುವ ವಿಜ್ಞಾನ ಹಾಗೂ ತಾಂತ್ರಿಕ ಮಹತ್ವವನ್ನರಿತು, ಭಾರತದಲ್ಲಿ ಮೊದಲನೆಯ ವಿಧಿವಿಜ್ಞಾನ ಪ್ರಯೋಗ ಶಾಲೆಯು, ಮೊದಲಿದ್ದ ರಾಸಾಯನಿಕ ಪ್ರಯೋಗ ಶಾಲೆಯನ್ನು ಬೆಳೆಸಿ ೧೯೫೨ ರಲ್ಲಿ ಅಸ್ತಿತ್ವಕ್ಕೆ ಬಂತು. ಈಗ ಪ್ರತಿಯೊಂದು ರಾಜ್ಯದಲ್ಲಿಯೂ ಸುಸಜ್ಜಿತ ವಿಧಿವಿಜ್ಞಾನ ಪ್ರಯೋಗ ಶಾಲೆಗಳು ಇರುವವು. ೧೯೬೧ ರಲ್ಲಿ ಅಪರಾಧಶೋಧ ಶಾಸ್ತ್ರವನ್ನು ಸಾರ್ವಜನಿಕವಾಗಿ ಚರ್ಚಿಸಲು ಭಾರತೀಯ ವಿದ್ಯಾಶಾಲೆಯನ್ನು ಸ್ಥಾಪಿಸಲಾಯಿತು. ಇಲ್ಲಿ ಪ್ರತಿವರ್ಷವೂ ಸಭೆ ಕರೆದು ಸಂಶೋಧನಾ ಪ್ರಬಂಧಗಳನ್ನು ಚರ್ಚಿಸಲಾಗುತ್ತಿದೆ. ೧೯೭೦ ರಲ್ಲಿ ಭಾರತೀಯ ಅಪರಾಧ ಶಾಸ್ತ್ರ ಸಂಘವು ಮದ್ರಾಸದಲ್ಲಿ ಸಾಪಿಸಲ್ಪಟ್ಟು, ಅದು ಪ್ರತಿವರ್ಷ ಗೋಷ್ಠಿಯನ್ನು ಕರೆದು, ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ಸಲಹೆಗಳನ್ನು ಕೊಡುತ್ತಿದೆ. ೧೯೭೦ ರಲ್ಲಿ ಭಾರತ ಸರಕಾರದ ಗೃಹ ಮಂತ್ರಾಲಯವು ಅಪರಾಧ ಶಾಸ್ತ್ರ ಹಾಗೂ

ವಿಧಿವಿಜ್ಞಾನ ಸಂಸ್ಥೆಯನ್ನು, ಪೋಲೀಸರಿಗೆ, ನ್ಯಾಯಾಧೀಶರುಗಳಿಗೆ, ಜೇಲ ಅಧಿಕಾರಿಗಳಿಗೆ ವೈಜ್ಞಾನಿಕ ತರಬೇತು ಕೊಡಲು ಸ್ಥಾಪಿಸಿದೆ.

ಪರದೇಶಗಳಲ್ಲಿಯಂತೆ, ಭಾರತದಲ್ಲಿಯೂ ಅಪರಾಧ ಶಾಸ್ತ್ರ ವಿಷಯವನ್ನು ವಿಶ್ವವಿದ್ಯಾಲಯದಲ್ಲಿ ಕಲಿಯಲು, ಮಧ್ಯ ಪ್ರದೇಶದ ಸಾಗರ ವಿಶ್ವವಿದ್ಯಾಲಯದಲ್ಲಿ ೧೯೫೯ ರಲ್ಲಿ ಪ್ರಾರಂಭಿಸಲಾಯಿತು. ಈಗ ಕರ್ನಾಟಕ, ಮಂಗಳೂರ, ಮೈಸೂರ, ಮದ್ರಾಸ, ಪತಿಯಾಲಾ ಹಾಗೂ ಬಾಂಬೆ ಟಾಟಾ ಇನ್‌ಸ್ಟಿಟೂಟಗಳಲ್ಲಿ ಈ ವಿಷಯವನ್ನು ಕಲಿಯಬಹುದು. ಸಾಗರ ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳ ವಿಭಾಗಗಳು ಖಾಸಗಿಯಾಗಿ ತಮಗೆ ಕಳಿಸಿದ ವಸ್ತುಗಳ ಪರೀಕ್ಷೆ ಮಾಡಿ ತಮ್ಮ ತಜ್ಞ ಅಭಿಪ್ರಾಯಗಳನ್ನು ಕೊಟ್ಟು ನ್ಯಾಯಯುತ ತೀರ್ಪು ಸಿಗುವಂತೆ ಮಾಡಲು ಪ್ರಯತ್ನಿಸುತ್ತಿವೆ.

ಹೀಗೆ ಅಪರಾಧ ಶೋಧ ಶಾಸ್ತ್ರವು ಇಂದು ತಾಂತ್ರಿಕ ಹಾಗೂ ಇಲೆಕ್ಟ್ರಾನಿಕ್ ಯುಗದಲ್ಲಿ ಅಪರಾಧಿಗಳು ಎಷ್ಟೇ ಸೂಕ್ಷ್ಮ ರೀತಿಯಿಂದ ಅಪರಾಧ ಮಾಡಿದರೂ ಅವರನ್ನು ಕಂಡು ಹಿಡಿಯಲು ವಿಜ್ಞಾನದ ಸಹಾಯ ಪಡೆಯದೇ ಬೇರೆ ದಾರಿಯಿಲ್ಲದ್ದರಿಂದ ಈ ವಿಷಯದ ಮಹತ್ವ ಹೆಚ್ಚುತ್ತಿದೆ.

## ೮. ಉಪಸಂಹಾರ

ಅಪರಾಧಶೋಧ ಶಾಸ್ತ್ರವು ಮಾನವನ ಅತಿ ಮಹತ್ವದ ಚಟುವಟಿಕೆಗಳಿಗೆ ಕ್ರಾಂತಿಕಾರಕ ಸುಧಾರಣೆಯನ್ನು ಕೊಡುತ್ತಿದೆ.

ಅಪರಾಧ ಶೋಧ ಮಾಡಿ, ಅಪರಾಧಿಗಳನ್ನು ಶಿಕ್ಷಿಸಿ ನ್ಯಾಯ ಒದಗಿಸಿ ಕೊಡುವ ಕೆಲಸದಲ್ಲಿ ಹೊಸ ಹೊಸ ವಿಧಾನಗಳನ್ನು ಕಲ್ಪಿಸಿ ಕೊಡುತ್ತಿದೆ ಹಾಗೂ ಅದಕ್ಕೊಂದು ಹೊಸ ರೂಪವನ್ನೇ ಕೊಟ್ಟಿದೆ ಎಂದು ಹೇಳಬಹುದು.

ಬೆರಳಚ್ಚುಗಳ ವಿಷಯದಲ್ಲಿಯಂತೂ ಊಹೆಗೆ ನಿಲುಕದಷ್ಟು ಪ್ರಗತಿ ಸಾಧಿಸಿದೆ. ಕಂಪ್ಯೂಟರದಿಂದ ಬೆರಳಚ್ಚುಗಳನ್ನು ಅದರಲ್ಲಿ ಸಂಗ್ರಹಿಸಿ ತೀವ್ರ ಗತಿಯಿಂದ ಅಪರಾಧಿಗಳನ್ನು ಹಿಡಿಯಲು ಪೋಲೀಸರು ಪ್ರಯತ್ನ ಪಡುತ್ತಿದ್ದಾರೆ.

ಅಪರಾಧ ಹಾಗೂ ಅಪರಾಧಿಗಳ ಕಂಪ್ಯೂಟರ ಸಂಗ್ರಹದಿಂದ **(Computorization of crime & criminals)** ಕ್ಷಣ ಮಾತ್ರದಲ್ಲಿ ಅಪರಾಧ ಶೋಧದ ಕಾರ್ಯವನ್ನು ಮುಗಿಸುವಂತಹ ಪ್ರಯತ್ನಗಳೂ ನಡೆದಿವೆ. ಅಪರಾಧದ ಸ್ಥಳ, ವೇಳೆ, ಮಾಡಿದ ಪದ್ಧತಿ, ಸಿಕ್ಕ ಕುರುಹುಗಳು, ಅಪರಾಧದಲ್ಲಿ ತೊಡಗಿರಬಹುದಾದಂತಹ ಜನರ ಸಂಖ್ಯೆ, ಕಳವು ಮಾಡಲ್ಪಟ್ಟ ವಸ್ತುಗಳು, ಇತರ ಪುರಾವೆಗಳು, ಮುಂತಾದವುಗಳನ್ನು ಕಂಪ್ಯೂಟರದಲ್ಲಿ ಸಂಗ್ರಹಿಸಿಟ್ಟಿರುತ್ತಾರೆ. ಅಪರಾಧಿಗಳ ಪದ್ಧತಿ, ಸಂಖ್ಯೆ, ಉಪಯೋಗಿಸಿದ ಆಯುಧಗಳು, ಇತ್ಯಾದಿಗಳನ್ನು ಕಂಪ್ಯೂಟರದಲ್ಲಿ ಸಂಗ್ರಹಿಸಿಟ್ಟಿರುವರು. ಎಲ್ಲಿಯಾದರೂ ಅಪರಾಧ ಜರುಗಿದಾಗ ಕೂಡಲೇ ಅದನ್ನು ವಿಂಗಡಿಸಿ ಕಂಪ್ಯೂಟರ ಕೈಯಲ್ಲಿ ಕೊಟ್ಟರೆ, ಅದು ಮಾಡಿರಬಹುದಾದ ಅಪರಾಧಿಗಳ ಹೆಸರುಗಳನ್ನು ಕೊಡುತ್ತದೆ. ಈ ರೀತಿ ಅತಿ ಶೀಘ್ರವಾಗಿ ಅಪರಾಧಿ

ಗಳನ್ನು ಅವರು ಕಳ್ಳತನದ ಮಾಲನ್ನು ಖರ್ಚುಮಾಡುವದಕ್ಕಿಂತ ಮೊದಲೇ ಪೋಲೀಸರು ಹಿಡಿಯಬಹುದು.

ಆರೋಪಿಯು ಅಗ್ನ್ಯಾಸ್ತ್ರವನ್ನು ಹಾರಿಸಿಲ್ಲವೆಂದು ಹೇಳಬಹುದು. ಆದರೆ ಅವನು ಗುಂಡು ಹಾರಿಸಿರುವನೋ ಅಥವಾ ಇಲ್ಲವೋ ಎಂಬುದನ್ನೂ ಸಹ ತಿಳಿಯಬಹುದು. ಆರೋಪಿಯು ಮೈ, ಕೈ, ಹಾಗೂ ಬಟ್ಟೆಗಳ ಮೇಲೆ, ಗುಂಡು ಹಾರಿಸಿದ್ದರೆ, ಮದ್ದಿನ ಸೂಕ್ಷ್ಮ ಕಣಗಳನ್ನು ಇಲೆಕ್ಟ್ರೋನ ಮೈಕ್ರೋಸ್ಕೋಪ (Electron Microscope) ದಲ್ಲಿ ಅವುಗಳ ಗಾತ್ರ, ಆಕಾರಗಳಿಂದ ಸಿದ್ಧಮಾಡಬಹುದು.

ನ್ಯೂಟ್ರಾನ ಎಕ್ಟಿವೇಶನ್ ಎನಾಲಿಸಿಸ್ (Nutron activation analysis) ದ ಸಹಾಯದಿಂದ ಕೂದಲು, ಮಣ್ಣು, ಲೋಹಗಳಿದ್ದ ಮೂಲವಸ್ತುಗಳ, ಇತ್ಯಾದಿಗಳ ಕುರುಹುಗಳನ್ನು ವಿಂಗಡಿಸಿ ಅಪರಾಧಿಗಳನ್ನು ಕಂಡುಹಿಡಿಯಬಹುದು. ಉದಾ: ಕಳ್ಳರು ತಾಮ್ರದ ತಂತಿಯನ್ನು ತುಂಡುಮಾಡಿಕೊಂಡು ಅಪಹರಿಸಿದ್ದರು. ಪೋಲೀಸರು ಸಂಶಯಯುಕ್ತ ಜನರಲ್ಲಿದ್ದ ತಾಮ್ರದ ತಂತಿಯನ್ನು ತಮಗೆ ಬೇಕಾದಷ್ಟು ಕತ್ತರಿಸಿಕೊಂಡು ಸಂಶಯ ಕಂಡ ಅಂಗಡಿ ಹಾಗೂ ಆರೋಪಿಗಳ ಮನೆಯಲ್ಲಿದ್ದ ನಾಲ್ಕು ತರದ ತಾಮ್ರದ ತಂತಿಯನ್ನು 'ಅ','ಬ', 'ಕ','ಡ', ವಶಪಡಿಸಿಕೊಂಡು, ಕಳವಾಗಿ ಉಳಿದಿದ್ದ ತಂತಿ 'ಕ್ಷ'ವನ್ನೂ ವಿಧಿವಿಜ್ಞಾನ ಪ್ರಯೋಗ ಶಾಲೆಗೆ ಕಳಿಸಿದರು. ಇವುಗಳನ್ನು ಎನ್.ಎ.ಎನ್. ದಿಂದ ಪರೀಕ್ಷಿಸಿ 'ಕ್ಷ' ಹಾಗೂ 'ಬ' ತಂತಿಗಳು ಒಂದೇ

ತಂತಿಯ ಅಂಗವಾಗಿವೆ ಎಂದು ತಜ್ಞ ಅಭಿಪ್ರಾಯವನ್ನು ಕೊಟ್ಟರು. ಆಗ ಪೋಲೀಸರು 'ಬ' ತಂತಿಯ ಒಡೆಯನನ್ನು ವಿಚಾರಿಸಿದಾಗ ಆತನು ತನಗೆ ಮಾರಿದವನ ಹೆಸರನ್ನು ಹೇಳಿದನು. ಕೊನೆಗೆ ತನ್ನ ಅಪರಾಧವನ್ನು ಒಪ್ಪಿದಾಗ ಅವರ ಗ್ಯಾಂಗನ್ನೂ ಹಿಡಿದು ಯೋಗ್ಯ ಶಿಕ್ಷೆಗೊಳಪಡಿಸಲಾಯಿತು.

ಆರೋಪಿಯು ಅಪರಾಧದ ಸಂಬಂಧಪಟ್ಟ ವಿವರಗಳನು ವ ಚ್ಚಿಟ್ಟುಕೊಳ್ಳುವದು ಸ್ವಾಭಾವಿಕ. ಇದಕ್ಕಾಗಿಯೇ ಈಗ ನಾವು ಸುಳ್ಳನ್ನು ಕಂಡುಹಿಡಿಯುವ ಯಂತ್ರ (Lie detector)ವನ್ನು ಉಪಯೋಗಿಸುತ್ತೇವೆ. ಈ ಯಂತ್ರವು ಮಾನಸಿಕ ಹಾಗೂ ಶಾರೀರಿಕ ಪೃಥಃಕರಣ ತತ್ವದ ಆಧಾರದಿಂದ ತಯಾರಿಸಲ್ಪಟ್ಟಿದೆ. ಆರೋಪಿಯನ್ನು ಈ ಯಂತ್ರದ ಮುಖಾಂತರ ಅವನಿಗೆ ಕೇಳಿದ ಪ್ರಶ್ನೆಗಳನ್ನು ಪಾಲಿಗ್ರಾಫ್ ರೂಪದಲ್ಲಿ ಚಿತ್ರಿಸುತ್ತದೆ. ಅಪರಾಧಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಉತ್ತರಿಸುವಾಗ, ಅವನ ರಕ್ತ ಸಂಚಲನದ ಸಹಾಯದಿಂದ ಸುಳ್ಳನ್ನು ಚಿತ್ರಿಸುತ್ತದೆ. ದಿಲ್ಲಿ ನಗರದಲ್ಲಿ ಒಮ್ಮೆ ಒಬ್ಬ ಶ್ರೀಮಂತನ ಮನೆ ಕಳವಾಯಿತು. ಸಂಶಯಕ್ಕೆ ಸಿಕ್ಕ ಆರೋಪಿಗಳಲ್ಲಿ ಮನೆಯ ಆಳು ಸೇರಿದ್ದ. ಈ ಅಪರಾಧದಲ್ಲಿ ರಕ್ತ, ಬೆರಳಚ್ಚು, ಹೆಜ್ಜೆ ಗುರುತುಗಳು ಇತ್ಯಾದಿ ಕುರುಹುಗಳು ಯಾವವೂ ಇರಲಿಲ್ಲ. ಕಾರಣ ಎಲ್ಲ ಆರೋಪಿಗಳನ್ನು ಈ ಯಂತ್ರಕ್ಕೆ ಒಳಪಡಿಸಿದಾಗ ಮನೆಯ ಕೆಲಸದಾಳೇ ಕಳವು ಮಾಡಿದ್ದಾನೆ ಎಂದು ಹೇಳಿತು. ಆಗ ಅವನು ತನ್ನ ತಪ್ಪನ್ನೂ ಒಪ್ಪಿ ಬಚ್ಚಿಟ್ಟಿದ್ದ ಒಡವೆಗಳನ್ನು ಒಪ್ಪಿಸಿದನು.

ಇತ್ತೀಚೆಗೆ ಲಾಗಿ ಟೆಲಿಫೋನ ಮುಖಾಂತರ ಹೆದರಿಸಿ ಭಾರಿ ಮೊತ್ತದ ಹಣವನ್ನು ವಸೂಲ ಮಾಡುವದು ವಾಡಿಕೆಯಾಗಿದೆ. ಇವಕ್ಕೂ ಸಹ ವ್ಹಾಯಿಸ್ ಸ್ಪೆಕ್ಟ್ರೋಗ್ರಾಫ್(voice spectro graph)ನ್ನು ಉಪಯೋಗಿಸಿ ಧ್ವನಿಯನ್ನು ವಿಂಗಡಿಸಬಹುದು. ಸಂಶಯಸ್ಥ ಆರೋಪಿಗಳ ಧ್ವನಿಯನ್ನು ಹೋಲಿಸಿ ನೋಡಿ ನಿಜವಾದ ಅಪರಾಧಿಯನ್ನು ಕಂಡು ಹಿಡಿಯಬಹುದು.

ಈಗ ಟೋಕಿಯೋ ನಗರದಲ್ಲಿ ರಸ್ತೆ ಅಪಘಾತ ಮಾಡಿ ಓಡಿ ಹೋಗುವ ಚಾಲಕರು ಗೊಂದಲಕ್ಕೀಡಾಗಿದ್ದಾರೆ. ಯಾಕೆಂದರೆ ಪೋಲೀಸರು ಗಣಕ ಯಂತ್ರದ ಸಹಾಯದಿಂದ ಪಲಾಯಿತ ಚಾಲಕನನ್ನು ಕೇವಲ ೫ ನಿಮಿಷಗಳಲ್ಲಿ ಹಿಡಿಯಬಲ್ಲರು. ಹೊಡೆದು ಓಡಿದ ಕಾರಿನ ಬಣ್ಣದ ಸಣ್ಣ ತುಣಕನ್ನು "ಸೂಕ್ಷ್ಮ ಬಣ್ಣದ ಗಣಕ" ಯಂತ್ರವು ಬಣ್ಣದ ಸಮ್ಮಿಲನದ ವಿಶ್ಲೇಷಣೆಯಿಂದ, ಆ ಕಾರಿನ ಮಾಡೆಲ, ತಯಾರಿಸಿದ ವರ್ಷ, ಇತ್ಯಾದಿಗಳನ್ನು ಕೇವಲ ೦.೨ ಮಿ. ಮಿ. ಉದ್ದ ಬಣ್ಣದ ತುಂಡಿನಿಂದ ತತ್ಕ್ಷಣ ಹೇಳುತ್ತದೆ. ಜಪಾನದ ಇನ್ನೊಂದು ನಗರ ಉರವಾ ಎಂಬಲ್ಲಿ ರಸ್ತೆ ಅಪಘಾತಗಳನ್ನು ಕಡಿಮೆ ಮಾಡುವ ಸಲುವಾಗಿ ಮಾತಾಡುವ ರಸ್ತೆ ಕೆಂಪು ದೀಪಗಳಿವೆ. ಅಕಸ್ಮಾತ ದಾರಿಕಾರರು ತಪ್ಪು ದಾರಿಯಿಂದ ಹಾಯುತ್ತಿದ್ದರೆ. ಕೂಡಲೇ ಟೇಪ ಮಾಡಿದ ಹೆಣ್ಣಿನ ಧ್ವನಿಯೊಂದು ಅವರಿಗೆ ಎಚ್ಚರಿಸಿ, ಸರಿಯಾದ ಮಾರ್ಗ ಹಿಡಿಯಲು ಹೇಳುತ್ತದೆ.

ಸಂಘಟಿತ ಅಪರಾಧಿಗಳು ಪೋಲೀಸರ ವಾರ್ತೆಯನ್ನು ಕದ್ದು ಕೇಳುವದು ಎಲ್ಲರಿಗೂ ಗೊತ್ತು. ಈಗ ಹೀಗೆ ಕದ್ದು

ಕೇಳುವದನ್ನು ತಪ್ಪಿಸುವದಕ್ಕೆ ಪೋಲೀಸರು ಗಣಕ ಯಂತ್ರದಿಂದ
ರೇಡಿಯೋ ಸೆಟ್‌ನ್ನು ಕೂಡ್ರಿಸಿ ಕೇಳದಂತೆ ಮಾಡಿದ್ದಾರೆ.
ಪ್ರತಿಯೊಂದು ಮನೆಯಲ್ಲಿ ಇಲ್ಲವೆ ಅಂಗಡಿಯಲ್ಲಿ ಕನ್ನಗಳ್ಳರಿಂ
ಎಚ್ಚರಿಸುವ ಯಂತ್ರವನ್ನು (Burglar alarm) ಕೂಡ್ರಿಸಿ
ಕಳ್ಳರಿಂದ ಕಳ್ಳತನ ತಡೆಯಬಹುದು. ಆರೋಪಿಗಳನ್ನು ಕ
ದೊಯ್ಯುವಾಗ ಅವರು ತಮ್ಮ ಶರೀರದಲ್ಲಿ ಯಾವದಾದರೂ
ಮೆಟಲ್ ಚೂರನ್ನು ಒಯ್ಯುತ್ತಿದ್ದರೆ, ಒಂದು ಯಂತ್ರದ
ಸಹಾಯದಿಂದ ಗುರುತಿಸಬಹುದು. ಮೆಟಲ್ ಇದ್ದರೆ ಸಣ್ಣ
ದೀಪದ ಸೂಚನೆ ಕೊಡುತ್ತದೆ. ಟಿಯರ್ ಗ್ಯಾಸ ಗ್ಯಾಜೆಟ
(Tear gas gadget) ದ ಸಹಾಯದಿಂದ ಓಡಿ ಹೋಗ
ತ್ತಿರುವ ಆರೋಪಿಗಳನ್ನು ಹಿಡಿಯಬಹುದು.

ತಂತಿವರದಿ ಜಾಲ, ದೂರಮುದ್ರಕ, ದೂರವರ್ಶನ
ವೈಜ್ಞಾನಿಕ ಕ್ಯಾಮರಾ, ಇತ್ಯಾದಿಗಳಿಂದ ಛಾಯಾಚಿತ್ರ, ಕೆ
ಬೆರಳಚ್ಚುಗಳನ್ನು ಶೀಘ್ರ ಗತಿಯಿಂದ ಒಂದು ಸ್ಥಳದಿಂ
ಇನ್ನೊಂದು ಸ್ಥಳಕ್ಕೆ ರವಾನಿಸಬಹುದಾದ್ದರಿಂದ ಅಪರಾಧ ತ
ಯುವಿಕೆಗೆ ಹಾಗೂ ಶೀಘ್ರ ತನಿಖೆಗೂ ಪೋಲಿಸರಿಗೆ ಬಹ
ಸಹಾಯಕವಾಗಿವೆ. ಕ್ಲೋಜ ಸರ್ಕಿಟ್ T.V, ಹೆಲಿಕ್ಯಾಪ್ಟರ್
ವಾಕೀ ಟಾಕಿ (Walkie Talkie) ಸೆಟ್‌ಗಳ ಸಹಾಯ
ದಿಂದ ವಿಶೇಷ ಸಾರಿಗೆ ಓಡಾಟಗಳನ್ನು ನಿಯಂತ್ರಿಸಬಹುದು
ದಿಲ್ಲಿಯ ಪೋಲೀಸರು ಹೆಲಿಕ್ಯಾಪ್ಟರ ಸಹಾಯದಿಂದ ಏಶಿಯನ
ಗೇಮ್ಸ ಕಾಲದಲ್ಲಿ ಟ್ರಾಫಿಕ್ ನಿಯಂತ್ರಿಸಿದರು.

ರಾಷ್ಟ್ರೀಯ ಪೋಲೀಸ ಗಣಕ ಯಂತ್ರವನ್ನು ರಾಜ್ಯಗಳ ಗಣಕಗಳಿಗೆ ಜೋಡಿಸುವದರಿಂದ ಬೇಗ ಅಪರಾಧ ವರ್ತಮಾನ ತಿಳಿಯುವದಕ್ಕೆ ಸಹಾಯವಾಗುವದು. ವಿಜ್ಞಾನದ ಸಹಾಯದಿಂದ ಅಪರಾಧಗಳನ್ನು ಪತ್ತೆ ಹಚ್ಚುವದಕ್ಕೂ, ಅಪರಾಧಿಗಳನ್ನು ಹಿಡಿದುಕೊಡುವದಕ್ಕೂ, ಅಪರಾಧ ಕಡಿಮೆ ಮಾಡುವದಕ್ಕೂ ಬಹಳ ಸಹಾಯಕಾರಿಯಾಗಿದೆ. ಆದರೆ ಅತ್ಯಾಧುನಿಕ ಯಂತ್ರಗಳನ್ನು ಉಪಯೋಗಿಸುವ ಸಲುವಾಗಿ ವಿಶೇಷ ತರಬೇತಿಯನ್ನು ಪೋಲೀಸರಿಗೆ ಕೊಡುವದು ಅತೀ ಅವಶ್ಯ. ನಮ್ಮ ಪೋಲೀಸ ಪಡೆಗಳು ವಿಜ್ಞಾನದ ಬಳಕೆಯನ್ನು ಮಾಡಿದರೆ ಅಪರಾಧಿಗಳಾರೂ ಪೋಲೀಸರ ಕಪಿ ಮುಷ್ಟಿಯಿಂದ ಪಾರಾಗುವದು ಶಕ್ಯವಿಲ್ಲ.



## ಉಪನ್ಯಾಸ ಗ್ರಂಥ ಮಾಲೆಯ ಕೆಲವು ಉಪಯುಕ್ತ ಪುಸ್ತಕಗಳು

೧. ಪ್ರಜಾಪ್ರಭುತ್ವದಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆ
—ಹವಾಲದಾರ ಸರೋಜಾದೇವಿ

೨. ಪೋಲೀಸಿನವರು ಮತ್ತು ಸಾರ್ವಜನಿಕರು
—ಎನ್. ನಾಗರಾಜರಾವ್

೩. ಅಪರಾಧಿಗಳು ಹಾಗೂ ಅವರ ಸುಧಾರಣೆ
—ಎಸ್.ಎಫ್. ಪೂಜಾರ

೪. ಗ್ರಾಮೋದ್ಯೋಗಗಳ ಮಹತ್ವ —ಪಿ.ಎ. ಭಟ್

೫. ಗ್ರಾಮಾಂತರ ಪ್ರದೇಶಗಳಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳ ಪಾತ್ರ —ಎ.ಎಂ. ಯರನಾ

೬. ಮದುವೆ ಮತ್ತು ಮಹಿಳೆ —ನೀಲಮ್ಮ ಕತ್ನಳ್ಳಿ

೭. ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ
—ಎನ್.ಎ. ಪಾಟೀ

೮. ನಮ್ಮ ದೇಶದಲ್ಲಿ ಬಡತನ ಹಾಗೂ ಅದರ ನಿವಾರಣೆ
—ಎಂ.ಸಿ. ಕೊ

೯. ಸ್ತ್ರೀ ನಡೆದು ಬಂದ ದಾರಿ —ಸರೋಜಿನಿ ಶಿಂ

೧೦. ಹಿಂದೂ ವಿವಾಹ ಪದ್ಧತಿ —ಎಚ್.ಬಿ. ಮಾ

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦ ೦೦೩